# ಅವಿಭಜಿತ ದಕ್ಷಿಣ ಕನ್ನಡದಲ್ಲಿ ಮಹಿಳೆ :

# ವಸಾಹತುಶಾಹಿ ಘಟ್ಟದಲ್ಲಿ ಕಂಡ ಸ್ಥಿತ್ಯಂತರಗಳು

## ಕ್ರಿ.ಶ. ೧೮೦೦-೧೯೪೭

ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕಿ

ಶ್ರೀಮತಿ ದುರ್ಗಲಕ್ಷ್ಮೀ

ಮಾರ್ಗದರ್ಶಕರು

ಡಾ|| ಸಿ. ಎಲ್. ಫುರ್ತಾದೋ

೨೦೦೮

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಅವಿಭಜಿತ ದಕ್ಷಿಣ ಕನ್ನಡದಲ್ಲಿ ಮಹಿಳೆ:

## ವಸಾಹತುಶಾಹಿ ಘಟ್ಟದಲ್ಲಿ ಕಂಡ ಸ್ಥಿತ್ಯಂತರಗಳು

ಕ್ರಿ.ಶ ೧೮೦೦ – ೧೯೪೭

ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ



ಸಂಶೋಧಕಿ

ಶ್ರೀಮತಿ ದುರ್ಗಾಲಕ್ಷ್ಮೀ

ಮಾರ್ಗದರ್ಶಕರು

ಡಾ॥ ಸಿ. ಎಲ್. ಫುರ್ತಾದೋ

೨೦೦೮



ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಯೋಗ್ಯತಾ ಪತ್ರ

ಶ್ರೀಮತಿ ದುರ್ಗಾಲಕ್ಷ್ಮೀ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ 'ಅವಿಭಜಿತ ದಕ್ಷಿಣ ಕನ್ನಡದಲ್ಲಿ ಮಹಿಳೆ': ವಸಾಹತುಶಾಹಿ ಘಟ್ಟದಲ್ಲಿ ಕಂಡ ಸ್ಥಿತ್ಯಂತರಗಳು ಎಂಬ ಶೀರ್ಷಿಕೆಯ ಈ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಸಲ್ಲಿಸಲು ಸಿದ್ಧಪಡಿಸಿದ್ದಾರೆ. ಈ ನಿಬಂಧವು ಸಂಶೋಧಕರ ಸ್ವಂತ ಪರಿಶ್ರಮ, ಅಭಿಪ್ರಾಯ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಈ ನಿಬಂಧದ ವಿಷಯಗಳನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ.

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ**
**ಬಲ್ಮಠ, ಮಂಗಳೂರು.**
**ತಾ:**

**ಡಾ|| ಸಿ.ಎಲ್. ಫುರ್ತಾದೊ**
**ಸಂಶೋಧನಾ ಮಾರ್ಗದರ್ಶಕರು**

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **ಅವಿಭಜಿತ ದಕ್ಷಿಣ ಕನ್ನಡದಲ್ಲಿ ಮಹಿಳೆ: ವಸಾಹತುಶಾಹಿ ಘಟ್ಟದಲ್ಲಿ ಕಂಡ ಸ್ಥಿತ್ಯಂತರಗಳು ಕ್ರಿ.ಶ ೧೮೦೦ – ೧೯೪೭** ಎಂಬ ಶೀರ್ಷಿಕೆಯ ಈ ನಿಬಂಧವು ಸಂಶೋಧಕಿಯ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲಶ್ರುತಿಯಾಗಿದೆ, ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಸಿ.ಎಲ್. ಫುರ್ತಾದೋ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾದಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಕರ್ನಾಟಕ ಥಿಯೋಲಾಜಿಕಲ್ ಕೇಂದ್ರ**

**ಮಂಗಳೂರು**

Durgalaxmi

**ದುರ್ಗಾಲಕ್ಷ್ಮೀ**

# ಅವಿಭಜಿತ ದಕ್ಷಿಣ ಕನ್ನಡದಲ್ಲಿ ಮಹಿಳೆ:

# ವಸಾಹತುಶಾಹಿ ಘಟ್ಟದಲ್ಲಿ ಕಂಡ ಸ್ಥಿತ್ಯಂತರಗಳು

ಕ್ರಿ.ಶ ೧೮೦೦ – ೧೯೪೭

<u>ಅಧ್ಯಾಯಗಳ ವಿವರ</u>

**ಅಧ್ಯಾಯ – ೧**

**ಪೀಠಿಕೆ**

ಅ) ಅಧ್ಯಯನದ ವ್ಯಾಪ್ತಿ

ಆ) ಕ್ರಮ

ಇ) ಕ್ಷೇತ್ರ ಕಾರ್ಯ

ಈ) ಉದ್ದೇಶ

**ಅಧ್ಯಾಯ – ೨**

**ವಸಾಹತು ಶಾಹಿ ಆಡಳಿತಕ್ಕೆ ಮೊದಲು ಸ್ತ್ರೀಯರ ಸ್ಥಾನ ಮಾನ**

ಅ) ಆರ್ಥಿಕ ಸಬಲತೆ

ಆ) ಸಾಮಾಜಿಕ ಸ್ಥಾನಮಾನ

ಇ) ಸಂಪ್ರದಾಯ ಮತ್ತು ಆಚರಣೆಗಳು

**ಅಧ್ಯಾಯ –೩**

**ಸ್ತ್ರೀಯರಿಗೆ ಪಾಶ್ಚಾತ್ಯ ಶಿಕ್ಷಣದ ಆರಂಭ**

ಅ) ಬಾಸೆಲ್ ಮಿಶನ್ ಮತ್ತು ಸ್ತ್ರೀ ಶಿಕ್ಷಣ

ಆ) ಸ್ತ್ರೀ ಶಿಕ್ಷಣಕ್ಕೆ ಕ್ಯಾಥೊಲಿಕರ ಕೊಡುಗೆಗಳು

ಇ) ಸರಕಾರೀ ಶಿಕ್ಷಣ ಸಂಸ್ಥೆಗಳು

ಈ) ಪಾಶ್ಚಾತ್ಯದ ಶಿಕ್ಷಣದ ಪ್ರಭಾವ

**ಅಧ್ಯಾಯ – ೪**

**ಸ್ತ್ರೀ ವಿಮೋಚನೆ – ಸಮಾಜ ಸುಧಾರಣಾ ಸಂಘಗಳ ಪಾತ್ರ**

ಅ) ಬ್ರಹ್ಮ ಸಮಾಜ

ಆ) ಆರ್ಯ ಸಮಾಜ

ಇ) ಥಿಯೋಸೊಫಿಕಲ್ ಸೊಸೈಟಿ

ಈ) ಸ್ತ್ರೀವಿಮೋಚನಾಗಾರ್ತಿ – ಪಂಡಿತಾ ರಮಾಬಾಯಿ

ಉ) ಸ್ತ್ರೀ ವಿಮೋಚನೆ – ಕುದ್ಮಲ್ ರಂಗರಾವ್ ಅವರ ಕೊಡುಗೆಗಳು

**ಅಧ್ಯಾಯ – ೫**

**ಸ್ತ್ರೀಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ**

ಅ) ಅಶಿಕ್ಷಿತ ಸ್ತ್ರೀಯರ ಉದ್ಯೋಗಗಳು

ಆ) ಶಿಕ್ಷಿತ ಸ್ತ್ರೀಯರು ಉದ್ಯೋಗ ರಂಗದಲ್ಲಿ ಸಾರ್ವಜನಿಕ ಚಟುವಟಿಕೆಗಳಲ್ಲಿ

ಇ) ಮಂಗಳೂರಿನ ಮಹಿಳಾ ಸಭಾ

**ಅಧ್ಯಾಯ–೬**

**ರಾಷ್ಟ್ರೀಯ ಹೋರಾಟ ಮತ್ತು ಮಹಿಳೆಯರು**

ಅ) ಗಾಂಧೀಪೂರ್ವ ಯುಗ

ಆ) ಗಾಂಧೀಯುಗ – ತತ್ವಗಳ ಪ್ರಭಾವ

ಇ) ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರು

೧) ಲಕ್ಷ್ಮೀ ರೈ

೨) ಸುಗುಣಾ ಕಾರ್ನಾಡ್ ದೇಸಾಯಿ

೩) ಕಮಲಾದೇವಿ ಚಟ್ಟೋಪಾಧ್ಯಾಯ

೪) ವಯಲೆಟ್ ಆಳ್ವ

೫) ನಿರುಪಮಾನಾಯಕ್

# ಅಧ್ಯಾಯ – ೧

## ಪೀಠಿಕೆ

ಅ) ಅಧ್ಯಯನದ ವ್ಯಾಪ್ತಿ

ಆ) ಕ್ರಮ

ಇ) ಕ್ಷೇತ್ರ ಕಾರ್ಯ

ಈ) ಉದ್ದೇಶ

# ಅಧ್ಯಾಯ – ೧

## ಪೀಠಿಕೆ

## ಅಧ್ಯಯನದ ವ್ಯಾಪ್ತಿ – ಕ್ರಮ – ಉದ್ದೇಶ

ಭಾರತೀಯ ಸ್ತ್ರೀಯರು ವೈದಿಕ ಸಮಾಜದಲ್ಲಿ ಉತ್ತಮ ಸ್ಥಾನವನ್ನು ಹೊಂದಿದ್ದರು ಎನ್ನುವ ಅಭಿಪ್ರಾಯಗಳಿದ್ದರೂ ನಂತರ ನಿಧಾನವಾಗಿ ಎರಡನೇ ದರ್ಜೆಯ ಸ್ಥಾನಕ್ಕಿಳಿಸಲ್ಪಟ್ಟರು. ಮಧ್ಯಯುಗದಲ್ಲಿ ತೀರಾ ನಿಕೃಷ್ಟ ಸ್ಥಾನಕ್ಕಿಳಿದ ಮಹಿಳೆ ಆಧುನಿಕ ಯುಗದಲ್ಲಿ ಪರಿವರ್ತನೆಯ ಹಾದಿಯನ್ನು ಕಂಡುಕೊಂಡಳು. ಈ ಒಂದು ಸ್ಥಿತ್ಯಂತರದ ಪ್ರಕ್ರಿಯ ಹಲವಾರು ವರ್ಷಗಳಲ್ಲಿ ಉಂಟಾಗಿದೆ. ಈ ಹಂತದಲ್ಲಿ ಅವಿಭಜಿತ ದಕ್ಷಿಣ ಕನ್ನಡದಲ್ಲಿ ನಡೆದ ಹಲವಾರು ಪ್ರಯತ್ನಗಳನ್ನು ವಿವರಿಸುವ ಕಾರ್ಯವನ್ನು ಈ ನಿಬಂಧದಲ್ಲಿ ಮಾಡಲಾಗಿದೆ.

ಮಹಿಳಾ ವಿಮೋಚನೆ ಮತ್ತು ಸ್ವಾತಂತ್ರ್ಯ ಹೋರಾಟ ನಮ್ಮ ದೇಶದಲ್ಲಿ ಒಟ್ಟೊಟ್ಟಿಗೆ ಸಾಗಿದೆ. ಹೇಗೆ ಭಾರತ ಮಾತೆಯನ್ನು ಬ್ರಿಟೀಷರ ದಾಸ್ಯದಿಂದ ಬಿಡುಗಡೆಗೊಳಿಸುವ ಅವಶ್ಯಕತೆಯಿತ್ತೋ ಹಾಗೆಯೇ ಪುರುಷರ ಅಧೀನತೆಯಲ್ಲಿ ಬಂಧಿಯಾಗಿದ್ದ ಮಹಿಳೆಯರೆಲ್ಲರನ್ನೂ ವಿಮೋಚನೆಗೊಳಿಸುವ ಕಾರ್ಯವೂ ಹತ್ತೊಂಭತ್ತನೇ ಶತಮಾನದಲ್ಲಿ ನಡೆಯಬೇಕಾಗಿತ್ತು. ಈ ಒಂದು ಕಾರ್ಯ ಇಡಿಯ ದೇಶದಲ್ಲಿ ನಡೆದಿದೆ. ಪುರುಷ ಚಿಂತಕರು ಮತ್ತು ಸುಧಾರಣಾವಾದಿಗಳು ಮಹಿಳೆಯರ ವಿಮೋಚನೆಗಾಗಿ ಹೋರಾಡಿರುವುದು ಎಲ್ಲರಿಗೂ ತಿಳಿದಿರುವ ವಿಷಯ, ಆಧುನಿಕ ಶಿಕ್ಷಣವನ್ನು ಪಡೆದುಕೊಂಡ ಸುಧಾರಣಾವಾದಿಗಳು ಈ ಒಂದು ಘನ ಕಾರ್ಯಕ್ಕೆ ಕೈ ಹಾಕಿದರು.

ಈ ನಿಬಂಧದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದ ಮಹಿಳಾಪರ ನಡೆದ ಚಳುವಳಿಗಳನ್ನು ವಿವರಿಸುವ ಪ್ರಯತ್ನವನ್ನು ಮಾಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ವಸಾಹತು ಪ್ರಭುತ್ವಕ್ಕೆ ಮೊದಲು ದಕ್ಷಿಣ ಕನ್ನಡದ ಸಮಾಜದಲ್ಲಿ ಮಹಿಳೆಯರ ಸ್ಥಿತಿಗಳು ಹೇಗಿತ್ತೆಂಬುದನ್ನು ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ. ಸೀಮಿತ ಚೌಕಟ್ಟಿನೊಳಗೆ ಬದುಕುವ ಅನಿವಾರ್ಯತೆಯನ್ನು ಸ್ತ್ರೀಯರಿಗೆ ಸಮಾಜದಲ್ಲಿ ಸೃಷ್ಟಿಸಲಾಗಿತ್ತು. ಯಾವುದೇ ರೀತಿಯಲ್ಲಿ ಸ್ವಂತ ಸಾಮರ್ಥ್ಯವಿಲ್ಲದ ಮಹಿಳೆಯರ ಬದುಕು ಹೇಗಿತ್ತೆಂಬುದನ್ನು ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಭಾವನೆಗಳ ಅಭಿವ್ಯಕ್ತಿಗಾಗಲಿ. ಸಾಮರ್ಥ್ಯದ ಪ್ರದರ್ಶನಕ್ಕಾಗಲಿ ಮಹಿಳೆಯರಿಗೆ ಅವಕಾಶವೇ ಇರಲಿಲ್ಲ. ಅವರ ಸೃಜನಶೀಲ ಪ್ರತಿಭೆಗಳು ಅರಳದೆ ಮುದುಡಿ ಹೋಗುತ್ತಿದ್ದವು. ಯಾವುದೇ ರೀತಿಯಲ್ಲಿ ಸ್ವಂತ

ಸಾಮರ್ಥ್ಯವಿಲ್ಲದ ಮಹಿಳೆಯರ ಬದುಕು ಹೇಗಿತ್ತೆಂಬುದನ್ನು ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಹತ್ತೊಂಭತ್ತನೇ ಶತಮಾನದಲ್ಲಿ ಸ್ತ್ರೀಯರ ಬದುಕಿನಲ್ಲಾದ ಸಕಾರಾತ್ಮಕ ಪರಿವರ್ತನೆಗೆ ಪಾಶ್ಚಾತ್ಯ ಶಿಕ್ಷಣವೇ ಕಾರಣವೆಂಬ ಅಂಶವನ್ನು ಒಪ್ಪಿಕೊಳ್ಳಬೇಕಾಗಿದೆ. ಹೆಣ್ಣೊಬ್ಬಳು ಪುರುಷನ ಆಜ್ಞಾನುವರ್ತಿಯಾಗಿಯೇ ಬದುಕಬೇಕೆಂಬ ಪುರುಷನ ಧೊರಣೆ ನಿಧಾನವಾಗಿ ಬದಲಾಗುತ್ತಾ ಹೋಯಿತು. ಮಹಿಳಾ ಶಿಕ್ಷಣದ ಬಗ್ಗೆ ನಡೆದ ಬೇರೆ ಬೇರೆ ಪ್ರಯತ್ನಗಳ ಬಗ್ಗೆ ಅಧ್ಯಯನವನ್ನು ಅಧಿಕೃತ ಮಾಹಿತಿಗಳನ್ನು ಸಂಗ್ರಹಿಸಿ ವಿವರಿಸಲಾಗಿದೆ. ಮಹಿಳೆಯರನ್ನು ಶಿಕ್ಷಿತರಾಗಿ ಮಾಡುವುದು ಒಂದು ದೊಡ್ಡ ಸವಾಲಾಗಿತ್ತು. ಆ ಕಾಲದಲ್ಲಿ ಮಹಿಳೆ ಗೃಹಕೃತ್ಯಗಳಿಗಿಂತ ಹೊರತಾದ ಕಾರ್ಯಗಳನ್ನು ಮಾಡಲೇಬಾರದೆಂಬ ಧೋರಣೆಯಿತ್ತು. ಸ್ತ್ರೀಯರ ಅಂತರಂಗದ ತುಡಿತವನ್ನು ಅರಿತವರಿಲ್ಲ. ಜಾನಪದ ಹಾಡುಗಳಲ್ಲಷ್ಟೆ ಆಕೆಯ ನೋವು ವ್ಯಕ್ತವಾಗುತ್ತಿತ್ತು. ಬಾಯಿ ತೆರೆದು ತನ್ನ ನೋವನ್ನು ಅಭಿವ್ಯಕ್ತಿಸುವ ಸಾಮರ್ಥ್ಯವನ್ನೇ ಕಳೆದುಕೊಂಡ ಆಕೆಗೆ ಖಂಡಿತವಾಗಿಯೂ ಆಧುನಿಕ ಶಿಕ್ಷಣ ಬೆಳಕನ್ನು ತೋರಿಸಿದೆ. ಇದಕ್ಕಾಗಿ ಜಿಲ್ಲೆಯಲ್ಲಿ ನಡೆದ ಅವಿರತ ಕಾರ್ಯಗಳ ಬಗ್ಗೆ ಸಾಧ್ಯವಾದಷ್ಟು ಮಟ್ಟಿಗೆ ವಸ್ತುನಿಷ್ಠವಾಗಿ ವಿವರಿಸಲಾಗಿದೆ. ಮೊದಮೊದಲು ಶಿಕ್ಷಣಕ್ಕೆ ಸ್ತ್ರೀಯರು ಸ್ಪಂದಿಸದೇ ಇದ್ದರೂ ೨೦ ನೇ ಶತಮಾನದ ಪ್ರಾರಂಭದ ಹೊತ್ತಿಗೆ ಸ್ತ್ರೀ ಶಿಕ್ಷಣದಲ್ಲಿ ಪ್ರಗತಿ ಕಂಡುಬಂತು.

ಬರಿಯ ಶಿಕ್ಷಣ ವ್ಯಕ್ತಿಯ ಸರ್ವಾಂಗೀಣ ಪ್ರಗತಿಗೆ ಅವಕಾಶ ಮಾಡಿಕೊಡುವುದು ಸಾಧ್ಯವಿಲ್ಲ. ಶಿಕ್ಷಣದ ಜೊತೆಗೆ ಚಿಂತನಾ ಸಾಮರ್ಥ್ಯವನ್ನು ಬೆಳೆಸಿಕೊಂಡಾಗ ಮಾತ್ರ ಜ್ಞಾನ ಬೆಳೆಯುತ್ತದೆ. ಪ್ರಶ್ನಿಸುವ ಮನೋಭಾವವಿಲ್ಲದಿದ್ದರೆ ಬೌದ್ಧಿಕ ಪ್ರಗತಿ ಸಾಧ್ಯವಿಲ್ಲ. ತಾನಿರುವ ಬಂಧಿತ ವರ್ತುಲದಿಂದ ಹೊರಬರಲು ಸ್ತ್ರೀಯರಿಗೆ ಇತರರ ಸಹಾಯ ಅನಿವಾರ್ಯವೇ ಆಗಿತ್ತು. ಇದಕ್ಕಾಗಿ ಸ್ತ್ರೀಯರಿಗೆ ಹೋರಾಟದ ದಾರಿ ಬೇಕಾಗಿತ್ತು. ಪುರುಷರೇ ಸ್ತ್ರೀಯರನ್ನು ಅಧೀನದಲ್ಲಿ ಇರಿಸಿದರಾದರೂ, ಅವರೇ ಸ್ತ್ರೀ ವಿಮೋಚನೆಗಾಗಿ ಹೋರಾಡಿದ್ದು ಸತ್ಯವೇ. ಅಖಿಲ ಭಾರತ ಮಟ್ಟದಲ್ಲಾದ ಸುಧಾರಣಾ ಚಳುವಳಿಗಳು ದಕ್ಷಿಣ ಕನ್ನಡಕ್ಕೂ ವ್ಯಾಪಿಸಿದವು. ಈ ವಿಮೋಚನಾ ಚಳುವಳಿಗಳ ಬಗ್ಗೆ ಸಂಗ್ರಹಿಸಿದ ಮಾಹಿತಿಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಶಿಕ್ಷಣ ಪ್ರಸಾರ ಮತ್ತು ವಿಮೋಚನಾ ಚಳುವಳಿಗಳು ಸ್ತ್ರೀಯರಲ್ಲಿ ಜಾಗೃತಿಯನ್ನು ಮೂಡಿಸಿದವು. ನಿಧಾನವಾಗಿ ಅರ್ಥಿಕವಾಗಿ, ಸ್ವಾವಲಂಬಿಗಳಾಗುವ ಪ್ರಯತ್ನವನ್ನು ಸ್ತ್ರೀಯರು ಪ್ರಾರಂಭಿದರು. ಈ ಒಂದು ಪ್ರಕ್ರಿಯ ವಸಾಹತುಶಾಹಿ ಕಾಲದಲ್ಲಿ ಅಷ್ಟೊಂದು ಉತ್ತಮ

ಬೆಳವಣಿಗೆಯನ್ನು ಕಂಡಿರಲಿಲ್ಲ. ಆದರೂ ಸ್ವಲ್ಪ ಮಟ್ಟಿನ ಪ್ರಗತಿ ಕಂಡು ಬಂತು. ಕೆಲ ಉನ್ನತ ವರ್ಗದ ಶಿಕ್ಷಿತ ಸ್ತ್ರೀಯರು ಸಾರ್ವಜನಿಕ ಚಟುವಟಿಕೆಗಳಲ್ಲಿ ಕಾಣಿಸಿಕೊಂಡರು. ಈ ಬಗ್ಗೆ ಅಧ್ಯಾಯ ಐದರಲ್ಲಿ ತಿಳಿಸಲಾಗಿದೆ.

ಇನ್ನು ಆರನೆಯ ಅಧ್ಯಾಯ ರಾಷ್ಟ್ರೀಯ ಹೋರಾಟ ಮತ್ತು ಮಹಿಳೆಯರ ಭಾಗವಹಿಸುವಿಕೆಯ ಬಗ್ಗೆ ವಿವರಿಸುತ್ತದೆ. ಸೀಮಿತ ವರ್ತುಲದಲ್ಲಿ ಮತ್ತು ಕೌಟುಂಬಿಕ ಚೌಕಟ್ಟಿನಲ್ಲಿ ಬದುಕುತ್ತಿದ್ದ ಸ್ತ್ರೀಯರು, ಕೇವಲ ಬೆರಳೆಣಿಕೆಯಷ್ಟು ಇದ್ದರೂ ರಾಷ್ಟ್ರೀಯ ಹೋರಾಟದಂತಹ ಮಹಾನ್ ಕಾರ್ಯದಲ್ಲಿ ಭಾಗವಹಿಸಿದ್ದು ವಿಶೇಷವೇ ಸರಿ. ಅದು ಮುಂದಿನ ತಲೆಮಾರಿನ ಸ್ತ್ರೀಯರಿಗೆ ಆದರ್ಶವಾಗಿತ್ತು. ಅವರಿಗೆ ಪ್ರೇರಕ ಶಕ್ತಿಯಾಗಿ ಇಂತಹ ಕಾರ್ಯಗಳನ್ನು ಮಾಡಿದ ಕೆಲ ಮಹಿಳೆಯರ ಬಗ್ಗೆ ಇಲ್ಲಿ ಸಂಗ್ರಹಿತ ಮಾಹಿತಿಯನ್ನು ನೀಡಲಾಗಿದೆ.

**<u>ಅ) ಅಧ್ಯಯನದ ವ್ಯಾಪ್ತಿ:</u>**

ಈ ನಿಂಬಂಧವನ್ನು ಬೌಗೋಳಿಕ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧಪಟ್ಟಂತೆ ರಚಿಸಲಾಗಿದೆ. ಮದ್ರಾಸ್ ಪ್ರಾಂತ್ಯದ ಭಾಗವಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂದಿನ ಕಾಸರಗೋಡು ಮತ್ತು ಉಡುಪಿಗಳೂ ಸೇರಿತ್ತು. ಆದರೆ ಹೆಚ್ಚಿನ ಚಟುವಟಿಕೆಗಳು ಜಿಲ್ಲೆಯ ಕೇಂದ್ರ ಸ್ಥಾನ ಮಂಗಳೂರಿನಲ್ಲೇ ನಡೆದಿರುವುದರಿಂದ ಮಂಗಳೂರಿನ ಚಟುವಟಿಕೆಗಳನ್ನೇ ಹೆಚ್ಚಾಗಿ ವಿವರಿಸಲಾಗಿದೆ. ಗ್ರಾಮೀಣ ಪ್ರದೇಶದಲ್ಲಾದ ಬೆಳವಣಿಗೆಗಳನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

ನಿಬಂಧದ ಕಾಲ ಘಟ್ಟವನ್ನು ೧೮೦೦ ರಿಂದ ೧೯೪೭ ರ ವರೆಗೆ ಎಂದು ಸೀಮಿತ ಗೊಳಿಸಲಾಗಿದೆ. ಆದ್ದರಿಂದ ಈ ಅವಧಿಯಲ್ಲಾದ ಮಹಿಳಾ ವಿಮೋಚಾನ ಹೋರಾಟಗಳ ಬಗ್ಗೆ ಮಾತ್ರ ಸಂಗ್ರಹಿತ ಮಾಹಿತಿಗಳನ್ನು ನೀಡಲಾಗಿದೆ.

**<u>ಆ) ಅಧ್ಯಯನದ ಕ್ರಮ:</u>**

ಅವಿಭಜಿತದ ದಕ್ಷಿಣ ಕನ್ನಡದಲ್ಲಿ ಮಹಿಳೆ ವಸಾಹತು ಶಾಹಿ ಘಟ್ಟದಲ್ಲಿ ಕಂಡ ಸ್ಥಿತ್ಯಂತರಗಳು (೧೮೦೦ – ೧೯೪೭) ಎಂಬ ಈ ನಿಂಬಂಧವನ್ನು ಸಂಗ್ರಹಿತ ಮಾಹಿತಿಗಳನ್ನಾಧರಿಸಿ ಮತ್ತು ಕೆಲವು ಅನುಭವೀ ವ್ಯಕ್ತಿಗಳೊಂದಿನ ಮೌಖಿಕ ಸಂದರ್ಶನದ ಆಧಾರದಲ್ಲಿ ರಚಿಸಲಾಗಿದೆ. ಲಭ್ಯವಿರುವ ಚಾರಿತ್ರಿಕ ದಾಖಲೆಗಳನ್ನೂ ಸಂಶೋಧನಾ ಪ್ರಬಂಧಗಳನ್ನು, ನಿಯತಕಾಲಿಕಗಳನ್ನೂ, ಇತಿಹಾಸ ಗ್ರಂಥಗಳನ್ನೂ, ರಾಷ್ಟ್ರೀಯ ಹೋರಾಟದ ಬಗ್ಗೆ ಪ್ರಕಟವಾದ ಕಿರು ಹೊತ್ತಿಗೆಗಳನ್ನು ಮತ್ತು ದಕ್ಷಿಣ ಕನ್ನಡದ ಬಗ್ಗೆ ರಚಿತಗೊಂಡ ಗ್ರಂಥಗಳ ಆಧಾರದಲ್ಲಿ ರಚಿಸಲಾಗಿದೆ.

**ಇ) ಕ್ಷೇತ್ರ ಕಾರ್ಯ:**

ಈ ನಿಬಂಧಕ್ಕೆ ಸಂಬಂಧಪಟ್ಟಂತೆ ಪ್ರಾಥಮಿಕ ಮೂಲಗಳಿಂದ ಮಾಹಿತಿ ಸಂಗ್ರಹಿಸಲು ಕ್ಷೇತ್ರ ಕಾರ್ಯ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಕೇಂದ್ರ ಸ್ಥಾನವಾದ ಮಂಗಳೂರಿನ ಆರ್ಯ ಸಮಾಜ, ಥಿಯೋಸೊಫಿಕಲ್ ಸೊಸೈಟಿ, ಮಹಿಳಾ ಸಭಾ ಮುಂತಾದ ಸಂಸ್ಥೆಗಳಿಗೆ ಭೇಟಿ ನೀಡಲಾಗಿದೆ. ಇವುಗಳ ಕಾರ್ಯಕರ್ತರಿಂದ ಮೌಖಿಕ ಮಾಹಿತಿಗಳನ್ನು ಪಡೆದುಕೊಳ್ಳಲಾಗಿದೆ. ಮಹಿಳಾ ಸಭಾದ ಕಛೇರಿಯಲ್ಲಿ ದೊರೆತ ಮದ್ರಾಸ್ ಸರ್ಕಾರದ ಮೂಲ ದಾಖಲೆಗಳನ್ನು ಬಳಸಿಕೊಳ್ಳಲಾಗಿದೆ. ಈ ದಾಖಲೆಯನ್ನಾಧರಿಸಿ ಮಹಿಳಾ ಸಭಾಕ್ಕೆ ಸಂಬಂಧಪಟ್ಟಂತೆ ನಿಖರ ಮಾಹಿತಿಗಳನ್ನು ನೀಡಲಾಗಿದೆ.

ವೈಯಕ್ತಿಕ ಸಂದರ್ಶನಗಳ ಮೂಲಕ ಮೌಖಿಕ ಮಾಹಿತಿಗಳನ್ನು ಪಡೆಯಲಾಗಿದೆ. ಗ್ರಾಮೀಣ ಪ್ರದೇಶಗಳಾದ ಪುತ್ತೂರು, ನರಿಂಗಾನ, ವಿಟ್ಲ, ಮುಡಿಪು ಮುಂತಾದ ಪ್ರದೇಶಗಳ ಕೆಲ ಸಾಮಾನ್ಯ ಮಹಿಳೆಯರ ಅನುಭವಗಳನ್ನು ಸಂಗ್ರಹಿಸಿ ಮಾಹಿತಿಗಳನ್ನು ನೀಡಲಾಗಿದೆ. ಸಾಧ್ಯವಾದಷ್ಟು ಮಟ್ಟಿಗೆ ವಸ್ತು ನಿಷ್ಠತೆಯನ್ನು ಕಾಯ್ದುಕೊಳ್ಳಲಾಗಿದೆ. ಇಷ್ಟಾದರೂ ಕೆಲವು ದೋಷಗಳು ಸಂಭವಿಸಿರಬಹುದು. ಸಮಯದ ಅಭಾವ ಮತ್ತು ಮೂಲ ದಾಖಲೆಗಳ ಕೊರತೆಯಿಂದ ಇನ್ನೂ ಹೆಚ್ಚಿನ ಗುಣಮಟ್ಟದ ಅಧ್ಯಯನ ಸಾಧ್ಯವಾಗಲಿಲ್ಲ. ಈ ನಿಬಂಧದ ವಿಷಯಕ್ಕೆ ಸಂಬಂಧಪಟ್ಟಂತೆ ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಅವಕಾಶವಿದೆ.

**ಈ) ಅಧ್ಯಯನದ ಉದ್ದೇಶ:**

ಇಪ್ಪತ್ತೊಂದನೆ ಶತಮಾನದಲ್ಲಿರುವ ನಾವಿಂದು ಮಹಿಳೆ ಎಲ್ಲಾ ಬಾಹ್ಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವುದನ್ನು ಕಾಣುತ್ತೇವೆ. ಆದರೆ ಹತ್ತೊಂಭತ್ತನೇ ಶತಮಾನದಿಂದ ಮಹಿಳೆ ಇಲ್ಲಿಯವರೆಗೆ ನಡೆದು ಬಂದ ದಾರಿ ಹೇಗಿದೆ ಎಂಬುದನ್ನು ಇಂದಿನ ಹುಡುಗಿಯರಿಗೆ ಪರಿಚಯಿಸುವುದೇ ಈ ಅಧ್ಯಯನದ ಉದ್ದೇಶ. ಮಹಿಳೆಯೊಬ್ಬಳು ಒಂಟಿಯಾಗಿ ಮನೆಯಿಂದ ಹೊರಗೆ ಬರುತ್ತಿರಲಿಲ್ಲ ಎನ್ನುವ ವಿಷಯ ಕೇಳಿದರೆ ಇಂದಿನ ಯುವತಿಯರು ಖಂಡಿತವಾಗಿ ಅಚ್ಚರಿ ವ್ಯಕ್ತಪಡಿಸುತ್ತಾರೆ. ಮಹಿಳೆಯೊಬ್ಬಳು ಮುಕ್ತವಾಗಿ ಓಡಾಡುವುದೇ ಸಾಧ್ಯವಿರಲಿಲ್ಲ ಎಂಬ ವಿಚಾರ ಅವರಿಗೆ ಅರಿವಾಗಬೇಕು. ಇಂದಿನ ಮಹಿಳೆಯರು ಬಹುಮಟ್ಟಿಗೆ ತಮ್ಮ ಬದುಕನ್ನು ತಾವು

ರೂಪಿಸುವ ಸ್ವಾತಂತ್ರ್ಯವನ್ನು ಪಡೆದುಕೊಂಡಿದ್ದಾರೆ ಆದರೆ ಇದನ್ನು ಪಡೆಯಬೇಕಾದರೆ ಅವರು ಎದುರಿಸಿದ ಅಡೆತಡೆಗಳೇನು ಎಂಬ ಪರಿಚಯ ಇಂದಿನ ಸ್ತ್ರೀಯರಿಗಾಗಬೇಕು. ಸುಮಾರು ೧೫೦ ವರ್ಷಗಳ ಹಿಂದೆ ಮಹಿಳೆಯರ ಬರ್ಬರ ಬದುಕು ಹೇಗಿತ್ತು ಎಂಬುದನ್ನು ನಾವು ತಿಳಿದುಕೊಳ್ಳಬೇಕು. ಬಾಲ ವಿಧವೆಯರ ಬರಡು ಬದುಕು ಇಂದು ಯೋಚಿಸುವುದಕ್ಕು ದುಃಖದ ಸಂಗತಿ. ಜಗತ್ತನ್ನು ಅರಿಯುವ ಮೊದಲೇ ಹುಡುಗಿಯರು ವಿವಾಹ ಬಂಧನಕ್ಕೊಳಗಾಗುತ್ತಿದ್ದರು. ಶಿಕ್ಷಣಕ್ಕೆ ಅವಕಾಶವೇ ಇರಲಿಲ್ಲ. ಕಟ್ಟುಪಾಡುಗಳೊಳಗೆ ಬಂಧಿಯಾದ ಜೀವನ ಮಹಿಳೆಯರದಾಗಿತ್ತು. ಈ ಬಂಧನದಿಂದ ಹೊರಬರಲು ಸ್ತ್ರೀಯರು ಎದುರಿಸಿದ ಅಡೆತಡೆಗಳೇನು ಎಂಬುದನ್ನು ಪರಿಚಯಿಸುವುದೇ ಈ ನಿಬಂಧದ ಉದ್ದೇಶ. ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಳ್ಳದೆ ಅರ್ಥ ಪೂರ್ಣ ಬದುಕನ್ನು ಸ್ತ್ರೀಯರು ಬದುಕುವಂತಾಗಲಿ.

# ಅಧ್ಯಾಯ – ೨

## ವಸಾಹತು ಶಾಹಿ ಆಡಳಿತಕ್ಕೆ ಮೊದಲು

## ಸ್ತ್ರೀಯರ ಸ್ಥಾನಮಾನ

ಅ) ಆರ್ಥಿಕ ಸಬಲತೆ

ಆ) ಸಾಮಾಜಿಕ ಸ್ಥಾನಮಾನ

ಇ) ಸಂಪ್ರದಾಯ ಮತ್ತು ಆಚರಣೆಗಳು

# ಅಧ್ಯಾಯ – ೨

## ವಸಾಹತುಶಾಹಿ ಆಡಳಿತಕ್ಕೆ ಮೊದಲು ಸ್ತ್ರೀಯರ ಸ್ಥಾನಮಾನ

ವಸಾಹತು ಶಾಹಿ ಆಡಳಿತ ಪ್ರಾರಂಭವಾಗುವ ಮೊದಲು ನಮ್ಮ ದೇಶದ ಯಾವುದೇ ಭಾಗದಲ್ಲಿ ಮಹಿಳೆಯರ ಸ್ಥಿತಿಗತಿಗಳು ಹೇಗಿತ್ತೆಂಬುದರ ಬಗ್ಗೆ ಚಾರಿತ್ರಿಕ ಲಿಖಿತ ಮಾಹಿತಿಗಳು ದೊರೆಯುವುದು ಬಹಳ ಕಡಿಮೆ. ಒಟ್ಟಾರೆಯಾಗಿ ಸಾಮಾಜಿಕ ಸ್ಥಿತಿಗಳು ಹೇಗಿತ್ತೆಂಬುದನ್ನು ನಾವು ಕೆಲವು ವಿದೇಶೀ ಪ್ರವಾಸಿಗರ ದಾಖಲೆಗಳಿಂದಷ್ಟೇ ತಿಳಿದುಕೊಳ್ಳಬಹುದು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಪರಿಸ್ಥಿತಿ ಹೇಗಿತ್ತೆಂಬುದನ್ನು ಕೆಲವು ವಿದೇಶಿ ವಿದ್ವಾಂಸರು ದಾಖಲಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅವರಲ್ಲಿ ಪ್ರಮುಖರಾದವರು ಫ್ರಾನ್ಸಿಸ್ ಬುಕನೆನ್, ಜೆ. ಸ್ಟರಕ್, ಪೆತ್ರೊ ಡಿ. ವೆಲ್ಲೆ ಮತ್ತು ಜಾನ್ ಸ್ಟುವರ್ಟ್. ಇವರ ಬರವಣಿಗೆಗಳ ಆಧಾರದಲ್ಲಿ ಮತ್ತು ಈಗಿರುವ ವ್ಯಕ್ತಿಗಳು ಪರಂಪರಾನುಗತವಾಗಿ ಪಡೆದುಕೊಂಡು ಬಂದ ಜ್ಞಾನ ಇಲ್ಲಿ ಬ್ರಿಟೀಷರ ಆಗಮನಕ್ಕೆ ಮೊದಲು ಸ್ತ್ರೀಯರ ಸ್ಥಾನಮಾನ ಹೇಗಿತ್ತೆಂಬುದನ್ನು ತಿಳಿಯಲು ಸಹಾಯಕಾರಿಯಾಗುತ್ತವೆ. ಈ ಕೆಳಗಿನ ಅಂಶಗಳಲ್ಲಿ ಅವರ ಸ್ಥಾನಮಾನ ಹೇಗಿತ್ತೆಂಬುದನ್ನು ತಿಳಿಸುವ ಪ್ರಯತ್ನ ಮಾಡಬೇಕಾಗುತ್ತದೆ.

**ಅ) ಆರ್ಥಿಕ ಸಬಲತೆ:**

ವಸಾಹತು ಶಾಹಿ ಅಡಳಿತಕ್ಕೆ ಮೊದಲು ಸ್ತ್ರೀಯರು ದಕ್ಷಿಣ ಕನ್ನಡದಲ್ಲಿ ಯಾವುದೇ ರೀತಿಯ ಅರ್ಥಿಕ ಸಬಲತೆಯನ್ನು ಸಾಧಿಸಿಲ್ಲ ಎಂಬುದು ಸ್ಪಷ್ಟ. ಯಾವುದೇ ರೀತಿಯ ಸ್ವಂತ ವರಮಾನವನ್ನಾಗಲೀ ಆಸ್ತಿಯನ್ನಾಗಲೀ, ಅವರು ಹೊಂದಿರಲಿಲ್ಲ. ಭೂಮಿ ಕಾಣಿಕೆಗಳನ್ನು ಅವರು ಪಡೆಯುತ್ತಿರಲಿಲ್ಲ. ತನ್ನ ಅವಶ್ಯಕತೆಗಳಿಗೆ ಸ್ತ್ರೀ ಗಂಡನನ್ನೋ, ಸಹೋದರರನ್ನೋ, ಆಥವಾ ತಂದೆಯನ್ನೋ ಅವಲಂಬಿಸಬೇಕಾಗಿತ್ತು. ಅವಿಭಕ್ತ ಕುಟುಂಬದಲ್ಲಿ ಯಾವುದೇ ರೀತಿಯ ಅರ್ಥಿಕ ಸಬಲತೆಯನ್ನು ಗಳಿಸಿಕೊಳ್ಳದ ಉನ್ನತ ವರ್ಗದ ಸ್ರೀಯರು ಕುಟುಂಬದಲ್ಲಿ ಶೋಷಣೆ, ದೌರ್ಜನ್ಯಕ್ಕೆ ಒಳಗಾಗುತ್ತಿದ್ದರು. ತಾವು ಅವಲಂಭಿಸಿದ ಪುರುಷರನ್ನೇ ಅವರು ಎಲ್ಲಾ ಆರ್ಥಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅವಲಂಬಿಸಿಕೊಳ್ಳಬೇಕಾಗಿತ್ತು. ವೈದ್ಯಕೀಯ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲೂ ಅವರಿಗೆ ಸ್ವಂತ ವರಮಾನವಿರಲಿಲ್ಲ.

ಅಳಿಯ ಸಂತಾನ ವ್ಯವಸ್ಥೆಯಿದ್ದ ಬಂಟ ಮತ್ತು ಇತರ ಕೆಲವು ಸಮುದಾಯಗಳಲ್ಲಿ ಕುಟುಂಬವನ್ನು ಮಾತೃವಂಶೀಯವಾಗಿ ಪರಿಗಣಿಸಲಾಗುತ್ತಿತ್ತಾದರೂ ಸ್ರೀಯೊಬ್ಬಳು ಅರ್ಥಿಕವಾಗಿ ಸ್ವತಂತ್ರವಾಗಿರುವ ಸಾಧ್ಯತೆಯಿರಲಿಲ್ಲ. ಕುಟುಂಬದ ಆಸ್ತಿ ಮಾತ್ರ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಸ್ತ್ರೀ ಸಂತಾನ ಆಧಾರವಾಗಿ ವರ್ಗಾವಣೆಯಾಗುತ್ತಿತ್ತು. ಅಂದರೆ ಆಸ್ತಿ ವರ್ಗಾವಣೆಯಾಗುತ್ತಿದ್ದುದು ಸೋದರ ಮಾವನಿಂದ ಅಳಿಯನಿಗೇ ಹೊರತು ಸ್ರೀಯೇ ಎಲ್ಲಾ ಅಧಿಕಾರವನ್ನು ಪಡೆದುಕೊಳ್ಳುತ್ತಿರಲಿಲ್ಲ. ಯಜಮಾನಿಕೆಯನ್ನು ಪುರುಷರೇ ನಡೆಸುತ್ತಿದ್ದರು. ಸ್ತ್ರೀ

ಯೊಬ್ಬಳು ಯಜಮಾನಿಕೆಯ ಸಾರಥ್ಯ ನಡೆಸುವುದಲ್ಲಿ ಅವಕಾಶವಿರಲಿಲ್ಲ ಅಲ್ಲದೆ ಇಲ್ಲಿಯೂ ಸ್ರೀಯರು ಸ್ವತಂತ್ರವಾಗಿ ಜೀವನ ರೂಪಿಸಿಕೊಳ್ಳುವ ಅವಕಾಶವಿರಲಿಲ್ಲ. ಆದರೆ ಸ್ತ್ರೀ ಪ್ರಧಾನ ಕುಟುಂಬ ಮತ್ತು ಅಳಿಯ ಸಂತಾನ ವ್ಯವಸ್ಥೆಯಿದ್ದ ಬಂಟ ಮತ್ತು ಇತರ ಕೆಲವು ಸಮುದಾಯದ ಸ್ರೀಯರು ಪುರುಷನ ಸಂಪೂರ್ಣ ಅಧಿಪತ್ಯಕ್ಕೆ ಒಳಗಾಗಿರಲಿಲ್ಲ ಎಂದಷ್ಟೇ ಹೇಳಬಹುದು. ಪಿತೃ ಪ್ರಧಾನ ಕುಟುಂಬದ ಸ್ತ್ರೀಯರಿಗಿಂತ ಇವರು ಹೆಚ್ಚು ಧೈರ್ಯವಂತರಾಗಿದ್ದರು. (೧)

ಇನ್ನೂ ಕೆಳವರ್ಗದ ಸ್ತ್ರೀಯರು ಮತ್ತು ವೇಶ್ಯೆಯರು ತಮ್ಮದೇ ವರಮಾನವನ್ನು ಹೊಂದಿದ್ದರು. ಕೂಲಿನಾಲಿ, ಇತರರ ಮನೆಕೆಲಸ, ತೋಟದ ಕೆಲಸ, ಅಕ್ಕಿಕುಟ್ಟುವ ಕಾರ್ಯಗಳಲ್ಲಿ ತೊಡಗಿಕೊಂಡಿದ್ದ ಸ್ರೀಯರು ತಮ್ಮ ಕುಟುಂಬಗಳಿಗೆ ಆರ್ಥಿಕವಾಗಿ ಆಧಾರವಾಗಿದ್ದರು. ಆದರೆ ಈ ಅರ್ಥಿಕ ಸಬಲತೆಯಿದ್ದರೂ ಸಾಮಾಜಿಕ ನಿರ್ಬಂಧಗಳಿಂದಾಗಿ ಅವರಿಗೂ ಸ್ವತಂತ್ರವಾಗಿ ಬದುಕುವ ಸಾಧ್ಯತೆಗಳು ಇರಲಿಲ್ಲ. (೨)

ಸ್ರೀ ಧನದ (ಮದುವೆ ಸಂದರ್ಭದಲ್ಲಿ ಪಡೆದು ಕೊಂಡ ಆಭರಣಗಳು) ಮೇಲೆ ಮಾತ್ರ ಸ್ರೀಯರಿಗೆ ಸಂಪೂರ್ಣ ಅಧಿಕಾರವಿತ್ತು. ಈ ಸ್ರೀಧನ ಎಲ್ಲಾವರ್ಗದವರಲ್ಲಿಯೂ, ತಾಯಿಯಿಂದ ಮಗಳಿಗೆ ವರ್ಗಾವಣೆಯಾಗುತ್ತಿತ್ತು. ಇಂದಿಗೂ ಕೂಡ ಇದೇ ವ್ಯವಸ್ಥೆ, ಮುಂದುವರಿಯುತ್ತಿದೆ. (೩)

ಒಟ್ಟಾರೆಯಾಗಿ ವಸಾಹತು ಶಾಹಿ ಆಡಳಿತಕ್ಕೆ ಮೊದಲು ಸ್ತ್ರೀಯರು ಅರ್ಥಿಕ ಸಶಕ್ತತೆಯನ್ನು ಸಾಧಿಸಿರಲಿಲ್ಲ ಎಂದೇ ಕಂಡುಬರುತ್ತದೆ. ಸ್ತ್ರೀಯೊಬ್ಬಳಿಗೆ ದೈನಂದಿನ ಅವಶ್ಯಕತೆಗಳನ್ನು ಪೂರೈಸಿದರಷ್ಟೇ ಸಾಕು ಎಂದು ಎಲ್ಲಾ ವರ್ಗದ ಪುರುಷರು ಪರಿಗಣಿಸಿದಂತಿತ್ತು. ಆರ್ಥಿಕ ಸಶಕ್ತತೆ ಸ್ತ್ರೀಯರನ್ನು ಪುರುಷಾಧಿಪತ್ಯದಿಂದ ಮುಕ್ತಗೊಳಿಸಬಹುದೆಂದು ಪುರುಷರು ಭಾವಿಸಿದಂತಿತ್ತು

ಆ) <u>**ಸಾಮಾಜಿಕ ಸ್ಥಾನಮಾನ:**</u>

ಹತ್ತೊಂಬತ್ತನೇ ಶತಮಾನದ ಮೊದಲು ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ಸಮಾಜ ಸಾಂಪ್ರದಾಯಿಕವಾಗಿಯೇ ರೂಪುಗೊಂಡಿತ್ತು ಎಂಬುದು ಫ್ರಾನ್ಸಿಸ್ ಬುಕನನ್ಸ್ ಅವರಿಗೆ ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ. ಅಂತೆಯೇ ಮಹಿಳೆಯರ ಸ್ಥಾನಮಾನವು ನಿಕೃಷ್ಟವೆಂದೇ ತಿಳಿಸಲಾಗಿದೆ. ಪಿತೃಮೂಲವೂ, ಪಿತೃ ಪ್ರಧಾನವೂ ಆದ ಸಮಾಜ ವ್ಯವಸ್ಥೆಯ ಕುಟುಂಬದ ಸದಸ್ಯೆಯರಾಗಿದ್ದ ಬ್ರಾಹ್ಮಣ ಮಹಿಳೆಯರೇ ಹೆಚ್ಚಿನ ಶೋಷಣೆಯನ್ನನುಭವಿಸುತ್ತಿದ್ದರು. ಅವರನ್ನು ಬಾಲ್ಯದಿಂದಲೇ ವಿವಾಹಕ್ಕಾಗಿ ಸಿದ್ಧಪಡಿಸಲಾಗುತ್ತಿತ್ತು. ವಿದ್ಯಾಭ್ಯಾಸದ ಅವಕಾಶವಿರಲಿಲ್ಲ. ಆಸಕ್ತಿಯಿದ್ದು, ಬುದ್ಧಿವಂತಳಿದ್ದರೂ ಓದು ಬರಹವನ್ನು ಅವರಿಗೆ ಸಂಪೂರ್ಣವಾಗಿ ನಿಷೇಧಿಸಲಾಗುತ್ತಿತ್ತು. ಪಿತೃ ಪ್ರಧಾನ ಕುಟುಂಬದ ಸದಸ್ಯೆಯಾರಾಗಿದ್ದ ಅವರು ರೂಢಿಗತ ನಿಯಮಾವಳಿಗಳನ್ನು ವಿರೋಧಿಸುವ ಸ್ಥಿತಿಯಲ್ಲಿ ಇರಲಿಲ್ಲ.

ಹೆತ್ತವರು ತಮ್ಮ ಮಗಳನ್ನು ತಮಗಿಂತಲೂ ಉತ್ತಮ ಸ್ಥಾನಮಾನದಲ್ಲಿದ್ದ ತಮ್ಮದೇ ಜಾತಿಯ ವರನಿಗೆ ವಿವಾಹ ಮಾಡಿಕೊಡುತ್ತಿದ್ದರು ಮದುವೆಯಾದ ಮೇಲೆ ಅವಳನ್ನು ಗಂಡನ ಮನೆಗೆ ಕಳುಹಿಸಲಾಗುತ್ತಿತ್ತು, ಅಲ್ಲಿ ಆಕೆ ಆ ಮನೆಯ ಸಂಪ್ರದಾಯ ಪದ್ಧತಿಗಳಿಗೆ ಹೊಂದಿಕೊಂಡೇ ಬಾಳಬೇಕಾಗಿತ್ತು. ತವರು ಮನೆಗೆ ಹೋಗುವುದಕ್ಕೂ ಪತಿಯ ಅಥವಾ ಆತನ ಮನೆಯವರಿಂದ ಅನುಮತಿ ಕೇಳಬೇಕಾಗಿತ್ತು. ಅವಳ ಪಾಲಿಗೆ ಗಂಡನು ದೇವದೇವತೆಗಳಿಗಿಂತಲೂ ಪರಮಾಧಿಕ ದೇವನಾದ್ದರಿಂದ ಅವನನ್ನು ಹಾಗೆಯೇ ಸೇವಿಸಬೇಕಾಗುತಿತ್ತು. ಅದೃಷ್ಟಶಾಲಿ ಎನಿಸಿದ ಹೆಣ್ಣು ಗಂಡು ಮಕ್ಕಳನ್ನು ಹೆತ್ತು ಪುನೀತಳೆನಿಸಿದರೆ, ಬಂಜೆಯಾದರೆ ಅಥವಾ ಹೆಣ್ಣು ಮಕ್ಕಳನ್ನೇ ಹೆತ್ತರೆ ಮನೆಯ ತೊತ್ತಿಗಿಂತಲೂ ಕಡೆ ಎನಿಸುತ್ತಿದ್ದಳು. ವಯಸ್ಸಾದಂತೆ ಮಕ್ಕಳು ಬೆಳೆದು ದೊಡ್ಡವರಾಗುವುದನ್ನು ಕಾಣುತ್ತಾ ಅವರ ಮದುವೆಗಳನ್ನು ಮಾಡಿ ಅತ್ತೆ ಅಜ್ಜಿಯ ಪಾತ್ರಗಳನ್ನು ಹೆಣ್ಣು ಒಪ್ಪಿಕೊಂಡು ಬಿಡುತ್ತಿದ್ದಳು.

ಕುಟುಂಬದ ಸೊಸೆಯೊಬ್ಬಳು ಸದಾಕಲವೂ ವಿಧೇಯಳಾಗಿ ಕಾಲ ಕಳೆಯಬೇಕಾಗಿತ್ತು. ತನ್ನನ್ನು ನಿಯಂತ್ರಿಸುವ ಗಂಡ ಮತ್ತು ಇತರ ಗಂಡಸರ ಕಡೆಗೆ ಸಹಾಯಕ್ಕಾಗಿ ದೈನ್ಯದಿಂದ ನೋಡುವ ದಾರಿಯಲ್ಲದೆ ಬೇರೇನೂ ಆಕೆಗೆ ಸಾಧ್ಯವಾಗುತ್ತಿರಲಿಲ್ಲ. (೪)

ಕೆಲವು ತಾಯಂದಿಯರು ತಮ್ಮ ಹೆಣ್ಣು ಮಕ್ಕಳಿಗೆ ಧಾರ್ಮಿಕ ಶಿಕ್ಷಣವನ್ನೂ ನೀಡುತ್ತಿದ್ದರು. ಮರಳಿನಲ್ಲಿ ಬರೆಸಿ ಕನ್ನಡ ಅಕ್ಷರಗಳನ್ನು ಕಲಿಸಲಾಗುತ್ತಿತ್ತು (೫) ಆದರೆ ಇದರಿಂದ ಅವರ ಅಧೀನ ಸ್ಥಾನಮಾನವೇನೂ ಬದಲಾವಣೆಯಾಗುತ್ತಿರಲಿಲ್ಲ. ಎಲ್ಲಾ ವರ್ಗದ ಮಹಿಳೆಯರೂ ತಮ್ಮ ಗಂಡಂದಿರಲ್ಲಿ ದಯ ದಾಕ್ಷಿಣ್ಯದಿಂದ ವರ್ತಿಸುತ್ತಿದ್ದರು. ಆರ್ಥಿಕವಾಗಿ ಸ್ವಲ್ಪ ಮಟ್ಟಿಗೆ ಸಬಲರಿದ್ದ ಕೆಲ ಮಹಿಳೆಯರು ಮತ್ತು ದುಡಿಯುವ ವರ್ಗದ ಸ್ತ್ರೀಯರೂ ಇದಕ್ಕೆ ಹೊರತಾಗಿರಲಿಲ್ಲ. ನಯನಾಜೂಕು ಶ್ರದ್ಧೆಗಳಿಂದ ಇಡೀ ಕುಟುಂಬದ ಕಾರ್ಯ ನಿರ್ವಹಿಸುತ್ತಿದ್ದರು. ಇಷ್ಟಾದರೂ ಗಂಡಂದಿರು ಅವರನ್ನು ಬೆದರಿಸುತ್ತಿದ್ದರು. ಪುರುಷನೆದುರು ನಿಂತು ತನ್ನ ಸ್ಥಾನಕ್ಕಾಗಿ ಹೋರಾಡುವ ಶಕ್ತಿಯನ್ನೇ ಅವರು ಹೊಂದಿರಲಿಲ್ಲ. ನರ್ತಕಿಯರು, ವೇಶ್ಯೆಯರು ಮಾತ್ರ ಸ್ವತಂತ್ರವಾಗಿ ವ್ಯವಹರಿಸುತ್ತಿದ್ದರು. ಅವರು ಪುರುಷನ ಅಧೀನತೆಗೆ ಒಳಪಟ್ಟಿರಲಿಲ್ಲ. ಪುರುಷನೆದುರು ತಮ್ಮ ದನಿಯುನ್ನೆತ್ತುವ ಧೈರ್ಯವನ್ನು ಅವರು ಪಡೆದುಕೊಂಡಿದ್ದರು ಎನ್ನುವ ಅಂಶವನ್ನು ಜೆರಾಲ್ಡಿನ್ ಫೋರ್ಟ್ ಅವರು ತಮ್ಮ 'ಆಧುನಿಕ ಭಾರತದಲ್ಲಿ ಮಹಿಳೆ' ಎನ್ನುವ ಗ್ರಂಥದಲ್ಲಿ ತಿಳಿಸಿದ್ದಾರೆ. (೬)

೧೯ ನೆಯ ಶತಮಾನಕ್ಕಿಂತಲೂ ಮೊದಲು ಸ್ತ್ರೀಯರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ, ದಯನೀಯ ಹಾಗೂ ಶೋಚನೀಯ ಪರಿಸ್ಥಿತಿಯಲ್ಲಿ ಸಿಲುಕಿದ್ದರೆಂದೇ ಅಭಿಪ್ರಾಯಪಡಬೇಕಾಗುತ್ತದೆ. ಕೌಟುಂಬಿಕ ಬಂಧನದಿಂದ ಹೊರಬಂದು ಮುಕ್ತ ಅವಕಾಶಗಳಿಗಾಗಿ ಅವರು ಹೋರಾಡಬೇಕಾಗಿತ್ತು.

**ಇ) ಸಂಪ್ರದಾಯ ಮತ್ತು ಆಚರಣೆಗಳು:**

ಶುದ್ಧ ಸಂಪ್ರದಾಯ ಬದ್ದ ಹದಿನೆಂಟನೇ ಶತಮಾನದ ದಕ್ಷಿಣ ಕನ್ನಡದಲ್ಲಿ ಮಹಿಳೆಯರ ಮೇಲೆ ಧರ್ಮದ ಹೆಸರಿನಲ್ಲಿ ಅನೇಕ ಕಟ್ಟುಪಾಡುಗಳನ್ನು ಹೇರಲಾಗಿತ್ತು. ಹೆಣ್ಣುಮಕ್ಕಳನ್ನು ಬಾಲ್ಯದಲ್ಲಿಯೇ ವಿವಾಹ ಮಾಡಿಕೊಡುವ ಪದ್ದತಿ ಬಹುತೇಕ ಎಲ್ಲಾ ಜಾತಿಗಳಲ್ಲಿಯೂ ಇತ್ತು. ಮುಖ್ಯವಾಗಿ ಬ್ರಾಹ್ಮಣ ಜಾತಿಯಲ್ಲಿ ಮೈನೆರೆಯುವ ಮೊದಲೇ ವಿವಾಹವನ್ನು ಹುಡುಗಿಯರಿಗೆ ನಡೆಸಲಾಗುತ್ತಿತ್ತು. ಒಂದು ವೇಳೆ ವಿವಾಹಕ್ಕೆ ಮೊದಲೇ ಮೈನೆರೆದರೆ ಆಕೆಯನ್ನು ಕಣ್ಣಿಗೆ ಬಟ್ಟೆ ಕಟ್ಟಿ ಕಾಡಿಗೆ ಬಿಡುವ ಸಂಪ್ರದಾಯವಿತ್ತು. ಬಾಲ್ಯದಲ್ಲಿಯೇ ವಿವಾಹವಾದ ಹುಡುಗಿ ವಿವಾಹದ ನಂತರ ಕಲವೇ ದಿನಗಳಲ್ಲಿ ಗಂಡನನ್ನು ಕಳೆದುಕೊಂಡರೆ ಬ್ರಾಹ್ಮಣರಲ್ಲಿ ಮರುವಿವಾಹಕ್ಕೆ ಅವಕಾಶವೇ ಇರಲಿಲ್ಲ. ಕೇಶ ಮುಂಡನ ಮಾಡಿಕೊಳ್ಳಬೇಕಾಗಿತ್ತು. ಗೃಹಿಣಿಯ ಎಲ್ಲಾ ಸೌಭಾಗ್ಯಗಳನ್ನು ಆಕೆ ಬಿಡಬೇಕಾಗಿತ್ತು. ಯಾವುದೇ ಮಂಗಳ ಕಾರ್ಯಗಳಲ್ಲಿ ಆಕೆ ಭಾಗವಹಿಸುವಂತಿರಲಿಲ್ಲ. ವಿಧವೆಯೊಬ್ಬಳ ಮುಖ ದರ್ಶನವೇ ಅಮಂಗಳವೆಂದು ಪರಿಗಣಿಸಲಾಗುತ್ತಿತ್ತು. ಪತಿಯ ಸಾವಿನ ನಂತರ ಅವಳ ಬದುಕೇನಿದ್ದರೂ ಅವನ ನೆನಪಿನಲ್ಲೇ ಕಳೆಯಬೇಕು. ಅವಳ ಸೂತಕದ ಮೈಲಿಗೆ ಎಂದೆಂದೂ ಕಳೆಯುವುದೇ ಇಲ್ಲ. ಪಶುಪ್ರಾಣಿಗಳಿಗಿಂತಲೂ ಅಪವಿತ್ರಳೆನಿಸಿಯೇ ಆಕೆ ಬದುಕನ್ನು ಸವೆಸಬೇಕು.

ವಿಧವೆಯೊಬ್ಬಳು ತನ್ನ ಕರ್ತವ್ಯಗಳನ್ನು ನಿಷ್ಠೆಯಿಂದ ಪಾಲಿಸಿದರೆ ಮಾತ್ರವೇ ಆಕೆ ಪರಲೋಕದಲ್ಲಿ ಶಾಂತಿಯನ್ನು ಪಡೆಯಲು ಸಾಧ್ಯ ಎನ್ನುವ ನಂಬಿಕೆ ಇತ್ತು (೭)

ಕೆಳವರ್ಗದ ಸ್ತ್ರೀಯರಲ್ಲಿ ವಿಧವೆಯ ಕೂಡಿಕೆ ಪದ್ದತಿಗೆ ಅವಕಾಶವಿತ್ತು. ವಿಧವೆಯ ವಿವಾಹಕ್ಕೆ ಕೈಧಾರೆ ಎಂದು ಕರೆಯಲಾಗುತ್ತಿತ್ತು.(೮) ಆಕೆಯನ್ನು ವಿವಾಹವಾದ ಪುರುಷನಿಗೆ ಬೇರೆ ಸ್ತ್ರೀಯರನ್ನು ವಿವಾಹವಾಗಲೂ ಅವಕಾಶವಿತ್ತು. ವಿಧವೆಯೊಂದಿಗಿನ ಕೂಡಿಕೆಯ ಸಂಬಂಧದಿಂದ ಹುಟ್ಟಿದ ಮಕ್ಕಳ ಸಾಮಾಜಿಕ ಸ್ಥಾನಮಾನಕ್ಕೇನೂ ಬಾಧಕವಿಲ್ಲದಿದ್ದರೂ ಕೂಡಿಕೆ ಸಂಬಂಧ ಮಾಡಿಕೊಂಡ ವಿಧವೆಯ ಸ್ಥಾನ ಮಾನ ಸ್ವಲ್ಪ ಕೆಳಮಟ್ಟದ್ದೆ ಆಗಿತ್ತು. ಆಕೆ ಮಂಗಳ ಕಾರ್ಯಗಳಲ್ಲಿ ಭಾಗವಹಿಸುವಂತಿರಲಿಲ್ಲ. ತನ್ನ ಮಕ್ಕಳ ವಿವಾಹದಲ್ಲಿನ ಧಾರ್ಮಿಕ ವಿಧಿಗಳನ್ನು ನಿರ್ವಹಿಸಲೂ ಆಕೆಗೆ ಅವಕಾಶವಿರಲಿಲ್ಲ. ಈ ವ್ಯವಸ್ಥೆ (ಕೂಡಿಕೆ) ಬಾಲ್ಯದಲ್ಲಿ ವಿಧವೆಯಾದ ಹುಡುಗಿಯೊಬ್ಬಳು ಜೀವನ ಪೂರ್ತಿ ಬರಡು ಜೀವನ ಮಾಡಬಾರದೆಂಬುದಕ್ಕಾಗಿ ಮಾಡಿಕೊಂಡಿದ್ದಾಗಿತ್ತು. (೯) ಆದ್ದರಿಂದ ಈ ಕೂಡಿಗೆ ವ್ಯವಸ್ಥೆಯೂ ಅಷ್ಟೊಂದು ಅಪೇಕ್ಷಣೀಯವಾಗಿರಲಿಲ್ಲ ಎನ್ನಬಹುದು.

ಬಹುಪತ್ನಿತ್ವವೂ ಎಲ್ಲಾ ವರ್ಗಗಳಲ್ಲಿಯೂ ಜಾರಿಯಲ್ಲಿತ್ತು. ರೂಢಿಗತ ಸಂಪ್ರದಾಯಗಳನ್ನು ಎಲ್ಲಾ ವರ್ಗದ ಸ್ತ್ರೀಯರೂ ಪಾಲಿಸಲೇ ಬೇಕಾಗಿತ್ತು. ಸಂಪ್ರದಾಯವನ್ನು ಮೀರುವ ಸಾಮರ್ಥ್ಯ ಅಂದಿನ ಯಾವ ಸ್ತ್ರೀಯರಿಗೂ ಇರಲಿಲ್ಲ. ಎಲ್ಲಾ ಧಾರ್ಮಿಕ ಕಟ್ಟುಪಾಡುಗಳನ್ನು ಹೇರಿ ಸ್ತ್ರೀಯರನ್ನು ನಿಯಂತ್ರಣದಲ್ಲಿರಿಸಿಕೊಳ್ಳುವ ಪದ್ದತಿ ಜಾತಿ ವರ್ಗಗಳನ್ನು ಮೀರಿ ಬೆಳೆದಿತ್ತು.

<u>**ಅಡಿ ಟಿಪ್ಪಣಿಗಳು:**</u>

೧) ಜಯರಾಮ ಸೇನವ – ಬಂಟ ಸಮುದಾಯದ ಹಿರಿಯ ವ್ಯಕ್ತಿ ಅಂಡಾಲಬೀಡು, ಮರಕಡ, ಮಂಗಳೂರು – ಸಂದರ್ಶನ ಮಾಹಿತಿ ಸಂಗ್ರಹ. ತಾ: ೧೫.೮.೨೦೦೮

ಗುರುರಾಜ ಭಟ್ – ಸ್ಟಡೀಸ್ ಇನ್ ತುಳುವ ಇಸ್ಟರಿ ಅಂದ ಕಲ್ಚರ್ ಪು.ಸ.೨೫೬

೨) ಜೆರಾಲ್ಡಿನ್ ಫೋರ್ಚ್ – ಮೂಲ ಇಂಗ್ಲೀಷ್ – ಕನ್ನಡಕ್ಕೆ ಎಚ್.ಎಸ್. ಪಾರ್ವತಿ–ಆಧುನಿಕ ಭಾರತದಲ್ಲಿ ಮಹಿಳೆ – ಹಂಪಿ ಕನ್ನಡ ವಿಶ್ವವಿದ್ಯಾನಿಲಯ ೨೦೦೧, ಪು.ಸಂಖ್ಯೆ ೨೮–೨೩೨.

೩) ಪ್ರಸ್ತುತ ಮುಂದುವರೆಯುತ್ತಿರುವ ವ್ಯವಸ್ಥೆ.

೪) ಜೆರಾಲ್ಡಿನ್ ಫೋರ್ಚ್ – ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ:೨೮

೫) ಕೆ. ಅಭಿಶಂಕರ್ – ಕರ್ನಾಟಕ ಗರ್ಝೆಟಿಯರ್ – ೧೯೭೩ – ಪು.ಸಂ:೫೪೬

೬) ಜೆರಾಲ್ಡಿನ್ ಫೋರ್ಚ್ – ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ:೨೯

೭) ಜೆರಾಲ್ಡಿನ್ ಫೋರ್ಚ್ – ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ:೨೮

೮) ಪ್ರಾನ್ಸಿಸ್ ಬುಕನನ್ಸ್ – ಎ ಜರ್ನಿ ಫ್ರಮ್ ಮಲಬಾರ್, ಕೂರ್ಗ್, ಕೆನರಾ – ಪು.ಸ:

೯) ಶ್ರೀಮತಿ ರೇಣುಕ – ನೇರ ಸಂದರ್ಶನ – ಮರಾಠಿ ನಾಯ್ಕ್ ಜಾತಿಯ ಹಿರಿಯ ಮಹಿಳೆ – ತಾ: ೧೫.೮.೨೦೦೮

# ಅಧ್ಯಾಯ – ೩

## ಸ್ತ್ರೀಯರಿಗೆ ಪಾಶ್ಚಾತ್ಯ ಶಿಕ್ಷಣದ ಆರಂಭ

ಅ) ಬಾಸೆಲ್ ಮಿಶನ್ ಮತ್ತು ಸ್ತ್ರೀ ಶಿಕ್ಷಣ

ಆ) ಸ್ತ್ರೀ ಶಿಕ್ಷಣಕ್ಕೆ ಕ್ಯಾಥೋಲಿಕರ ಕೊಡುಗೆಗಳು

ಇ) ಸರಕಾರೀ ಶಿಕ್ಷಣ ಸಂಸ್ಥೆಗಳು

ಈ) ಪಾಶ್ಚಾತ್ಯ ಶಿಕ್ಷಣದ ಪ್ರಭಾವ

# ಅಧ್ಯಾಯ – ೩
# ಸ್ತ್ರೀಯರಿಗೆ ಪಾಶ್ಚಾತ್ಯ ಶಿಕ್ಷಣದ ಆರಂಭ

ಸ್ತ್ರೀಯರ ಬದುಕಿನಲ್ಲಾದ ಗಮನೀಯ ಸುಧಾರಣೆಗೆ ಆಧುನಿಕ ಪಾಶ್ಚಾತ್ಯ ಶಿಕ್ಷಣವೇ ಕಾರಣವೆಂಬ ಸತ್ಯವನ್ನು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ. ವಸಾಹತು ಶಾಹಿ ಆಡಳಿತ ಕಾಲದಲ್ಲಿಯೇ ಸ್ತ್ರೀಯರು ಭಾರತದ ಎಲ್ಲೆಡೆ ಶಿಕ್ಷಣ ಪಡೆಯುವಂತಾಯಿತು. ವೈದಿಕ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀ ಶಿಕ್ಷಣಕ್ಕೆ ಅವಕಾಶವಿದ್ದಿತ್ತಾದರೂ ಉತ್ತರ ಮಧ್ಯಯುಗದ ಸಂದರ್ಭದಲ್ಲಿ ಹೆಣ್ಣುಮಕ್ಕಳು ಶಿಕ್ಷಣದಿಂದ ಸಂಪೂರ್ಣ ವಂಚಿತರಾಗಿದ್ದರು.

ಹತ್ತೊಂಭತ್ತನೇ ಶತಮಾನಕ್ಕೆ ಮೊದಲು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣವು ಸಾಂಪ್ರದಾಯಕವಾಗಿತ್ತು. ಹಿಂದೂಗಳಿಗ ಪಾಠಶಾಲೆಗಳಲ್ಲಿ ಶಿಕ್ಷಣವನ್ನು ನೀಡಲಾಗುತ್ತಿತ್ತು. ಮುಸ್ಲಿಮರು ಮದರಸಾ ಮತ್ತು ಮಕ್ತಬ್‌ಗಳಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಕ್ರಿಶ್ಚಿಯನ್ ಸಮುದಾಯದವರು ಮಾತ್ರ ಲ್ಯಾಟಿನ್ ಮತ್ತು ಪೋರ್ಚುಗೀಸ್ ಶಿಕ್ಷಣವನ್ನು ಪಡೆಯುತ್ತಿದ್ದರು. ಇದಕ್ಕಾಗಿ ಗೋವಾದ ಗುಮಾಸ್ತನಾಗಿದ್ದ ಮಾಷ್ಟೈ ಗ್ಯಾಬ್ರಿಯಲ್ ೧೮೧೭ ರಲ್ಲಿ ಮಂಗಳೂರಿನಲ್ಲಿ ಒಂದು ಶಾಲೆಯನ್ನು ತೆರೆದಿದ್ದರು. (೧) ಆದರೆ ಇದು ಎಲ್ಲಾ ವರ್ಗದವರಿಗೂ ತಲುಪಲಿಲ್ಲ.

ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯಲ್ಲಿ ಯಾವುದೇ ವರ್ಗದ ಹೆಣ್ಣುಮಕ್ಕಳಿಗೂ ಅವಕಾಶವಿರಲಿಲ್ಲ. ಕೆಲವು ಕುಟುಂಬಗಳಲ್ಲಿ ತಾಯಂದಿರು ತಮ್ಮ ಹೆಣ್ಣುಮಕ್ಕಳಿಗೆ ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಧಾರ್ಮಿಕ ಹಾಡುಗಳನ್ನು ಕಲಿಸುತ್ತಿದ್ದರು. ವ್ಯವಹಾರಕ್ಕೆ ತಕ್ಕಷ್ಟು ಗಣಿತವನ್ನೂ ಮತ್ತು ಮರಳಿನಲ್ಲಿ ಬರೆಸಿ ಕನ್ನಡ ಅಕ್ಷರಗಳನ್ನೂ ಕಲಿಸಲಾಗುತ್ತಿತ್ತು.(೨) ಆದರೂ ಹುಡುಗಿಯರ ಸಾಕ್ಷರತೆ ತೀರಾ ಕನಿಷ್ಠ ಮಟ್ಟದ್ದಾಗಿತ್ತು.

ಹತ್ತೊಂಭತ್ತನೆ ಶತಮಾನದ ದ್ವಿತೀಯಾರ್ಧದಲ್ಲಿ ನಮ್ಮ ದೇಶದಲ್ಲಿ ಆಧುನಿಕ ಶಿಕ್ಷಣ ವ್ಯಾಪಕವಾಗಿ ಪ್ರಸಾರವಾಗಲು ಪ್ರಾರಂಭವಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಇದಕ್ಕೆ ನಿಧಾನವಾಗಿ ಉತ್ತಮ ಪ್ರತಿಕ್ರಿಯೆ ಬರಲಾರಂಬಿಸಿತು. ಹೆಣ್ಣುಮಕ್ಕಳನ್ನು ಸುಶಿಕ್ಷಿತರಾಗಿಸುವ ಪ್ರಕ್ರಿಯೆಯಲ್ಲಿ ಈ ಭಾಗದಲ್ಲಿ ಮುಖ್ಯವಾಗಿ ಸರಕಾರಕ್ಕಿಂತಲೂ ಹೆಚ್ಚಾಗಿ ಬಾಸೆಲ್ ಮಿಶನ್ ಸಂಸ್ಥೆ,

ಕ್ಯಾಥೋಲಿಕ್ ಮಿಶನರಿಗಳು ಮತ್ತು ಥಿಯೋಸಫಿಕಲ್ ಸೊಸೈಟಿ ಪ್ರಾರಂಭಿಕ ಕಾರ್ಯಗಳನ್ನು ಮಾಡಿವೆ.

**ಅ) ಬಾಸೆಲ್ ಮಿಶನ್ ಮತ್ತು ಸ್ತ್ರೀ ಶಿಕ್ಷಣ:**

ಧರ್ಮ ಪ್ರಚಾರದ ಪೂರಕವಾಗಿ ಶಿಕ್ಷಣ ಪ್ರಸಾರದಲ್ಲಿ ತೊಡಗಿದ್ದ ಜರ್ಮನ್ ಮೂಲದ ಬಾಸೆಲ್ ಮಿಶನ್ ಮಂಗಳೂರಿನಲ್ಲಿ ಬೌದ್ಧಿಕ ಪ್ರಗತಿಯನ್ನು ತಂದಂತಹ ಕೀರ್ತಿಗೆ ಪಾತ್ರವಾಗಿದೆ. ಮಂಗಳೂರಿನ ಸಾಮಾನ್ಯ ಜನರನ್ನು ಶಿಕ್ಷಿತರನ್ನಾಗಿ ಮಾಡಿ ಅವರ ಬೌದ್ಧಿಕ ಮಟ್ಟ ಹೆಚ್ಚಿಸುವ ಕಾರ್ಯಕ್ರಮಗಳಲ್ಲಿ ಬಾಸೆಲ್ ಮಿಶನ್ ತೊಡಗಿಸಿಕೊಂಡಿತು. ಅದಕ್ಕಾಗಿಯೇ ಪ್ರಾಥಮಿಕ ಶಾಲೆಯನ್ನು ಮೊದಲಾಗಿ ಮಂಗಳೂರಿನ ರಥಬೀದಿಯಲ್ಲಿ ಪ್ರಾರಂಭಿಸಿತು. ಆದರೆ ಹೆಣ್ಣು ಮಕ್ಕಳನ್ನು ಸಾಮಾನ್ಯ ಶಾಲೆಗಳು ಆಕರ್ಷಿಸಲಿಲ್ಲ. ಸಾಂಪ್ರದಾಯಿಕ ಸಮಾಜದಲ್ಲಿ ಹೆಣ್ಣು ಮಕ್ಕಳನ್ನು ಹೊರಗೆ ಕಳುಹಿಸುವ ಪದ್ಧತಿಯೇ ಇರಲಿಲ್ಲ. ಸ್ತ್ರೀ ಶಿಕ್ಷಣವನ್ನು ಪ್ರಾರಂಭಿಸುವುದು ಒಂದು ದೊಡ್ಡ ಸವಾಲಾಗಿಯೇ ಇತ್ತು. ಹೆಣ್ಣು ಮಕ್ಕಳು ಮತ್ತು ಗಂಡು ಮಕ್ಕಳು ಪರಸ್ಪರ ಬೆರೆತು ಅಭ್ಯಸಿಸುವುದನ್ನು ಸಮಾಜದಲ್ಲಿ ಜನರು ಒಪ್ಪಿಕೊಳ್ಳುತ್ತಿರಲಿಲ್ಲ. ಇದಕ್ಕೆ ಕಟ್ಟುನಿಟ್ಟಿನ ನಿಷೇಧವಿತ್ತು. ಆದ್ದರಿಂದ ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಪ್ರತ್ಯೇಕ ಶಾಲೆಗಳೂ, ಅಧ್ಯಾಪಕರೂ ಇರಬೇಕಾದದ್ದು, ಅನಿವಾರ್ಯವೇ ಆಗಿತ್ತು. ಬಾಲಕಿಯರಿಗೆ ಶಿಕ್ಷಣ ನೀಡಿ ಅವರನ್ನು ಸಾಮಾಜಿಕ ಕಟ್ಟುಪಾಡುಗಳಿಂದ ವಿಮೋಚನೆಗೊಳಿಸುವ ವಿಚಾರ ಪತ್ರಿಕೆಗಳಲ್ಲಿ ಪ್ರಕಟಗೊಂಡಿತ್ತು. ಇದರ ಬಗ್ಗೆ ತೀವ್ರ ಗಮನ ಹರಿಸಿದ ಬಾಸೆಲ್ ಮಿಶನ್‌ನವರು ೧೮೫೫ ರಲ್ಲಿ ಮಂಗಳೂರಿನ ಶರವು ದೇವಸ್ಥಾನದ ಸಮೀಪ ಬ್ರಾಹ್ಮಣ ಹುಡುಗಿಯರ ಶಾಲೆಯನ್ನು ತೆರೆದರು. ಇಲ್ಲಿ ಹದಿನೇಳು ಹುಡುಗಿಯರು ಸೇರ್ಪಡೆಗೊಂಡರು. ಇಲ್ಲಿ ಶಿಕ್ಷಣ ಮಾಧ್ಯಮ ಕನ್ನಡವಾಗಿತ್ತು. ಇಂಗೀಷನ್ನು ಒಂದು ಭಾಷೆಯನ್ನಾಗಿ ಕಲಿಸಲಾಗುತ್ತಿತ್ತು. (೩)

ಬಾಲಕಿಯರ ಶಿಕ್ಷಣವನ್ನು ಸುಧಾರಿಸುವ ಕ್ರಮ ಕೈಗೊಳ್ಳುವ ಉದ್ದೇಶಕ್ಕಾಗಿ ೧೮೫೮ ರಲ್ಲಿ ಒಂದು ಸಂಘವನ್ನು ರಚಿಸಲಾಯಿತು. (ಎ ಸೋಸೈಟಿ ಫಾರ್ ಫಿಮೇಲ್ ಎಜುಕೇಶನ್ ಇನ್ ನಾನ್‌ಕ್ರಿಶ್ಚಿಯನ್ ಕಂಟ್ರಿಸ್ ಅಟ್ ಬಾಸೆಲ್) ಇದು ಹೆಣ್ಣು ಮಕ್ಕಳ ಶಿಕ್ಷಣ ಅಲಕ್ಷ್ಯಗೊಂಡಿದ್ದ ಬಗ್ಗೆ ಒಂದು ವರದಿ ತಯಾರಿಸಿ ಕೆಳಗಿನ ಎರಡು ಕಾರಣಗಳನ್ನು ನೀಡಿತು.

೧.) ಬಾಲಕಿಯರಿಗೆ ಸಂಪೂರ್ಣವಾಗಿ ಗೃಹ ಕೃತ್ಯಗಳಲ್ಲಿ ತರಬೇತಿ ನೀಡಿ ಸಾಂಸಾರಿಕ ಜವಬ್ದಾರಿಯನ್ನು ನಿರ್ವಹಿಸುವಂತೆ ಅವರನ್ನು ರೂಪಿಸುವುದು.

೨) ಇನ್ನೊಂದು ಬಾಲ್ಯದಲ್ಲಿಯೇ ಹೆಣ್ಣುಮಕ್ಕಳನ್ನು ವಿವಾಹಕ್ಕಾಗಿ ತಯಾರು ಮಾಡಿ ಅವರಿಗೆ ಶೀಘ್ರ ವಿವಾಹ ಸಂಬಂಧ ಕೂಡಿಸುವ ತವಕ.

ಸ್ರೀ ಶಿಕ್ಷಣದ ಬಗ್ಗೆ ಇದ್ದ ಅಲಕ್ಷ್ಯ ದೋರಣೆಯನ್ನು ಸುಭೋಧಿನಿ ಪತ್ರಿಕೆ ಈ ರೀತಿ ಪ್ರಕಟಿಸಿತು, *"ಸ್ತ್ರೀ ಶಿಕ್ಷಣವು ಅನ್ನ ದ್ವೇಷವುಳ್ಳ ರೋಗಿಯ ಮುಂದೆ ಪಕ್ವಾನ್ನ ಇಟ್ಟಾಂತಾಗಿದೆ"* ಇದನ್ನು ಪ್ರೇರೆಪಿಸಬೇಕು. (ಸುಭೋಧಿನಿ ೧೫ ಜುಲೈ ೧೮೬೧) (೪)

೧೮೫೮ ರಲ್ಲಿ ಬಾಸೆಲ್ ಮಿಶನ್ ಸಂಸ್ಥೆ ತಮ್ಮ ಎರಡನೇ ಸ್ತ್ರೀ ಶಿಕ್ಷಣ ಸಂಸ್ಥೆ ದೇಶೀ ಹುಡುಗಿಯರ ಶಾಲೆಯನ್ನು ತೆರೆಯಿತು. ನಂತರ ಬಾಲಕಿಯರ ಶಿಕ್ಷಣ ಸಂಸ್ಥೆಗಳನ್ನು ಬೆಳ್ತಿಗೆರೆ ಮೂಲ್ಕಿ, ಬಸ್ರೂರು, ಉಡುಪಿ ಮುಂತಾದ ಕಡೆಗಳಲ್ಲಿ ತೆರೆಯಲಾಗಿತ್ತು. ಶತಮಾನದ ಕೊನೆಯ ಹೊತ್ತಿಗೆ ಶಾಲೆಗಳಲ್ಲಿ ಹೆಣ್ಣು ಮಕ್ಕಳ ದಾಖಲಾತಿಯಲ್ಲಿ ಗಣನೀಯ ಏರಿಕೆ ಕಂಡು ಬಂತು.

ಕಾರ್ಕಳದಲ್ಲಿ ಕ್ರಿ. ಶ. ೧೯೦೦ ರಲ್ಲಿ ಒಂದು ಬಾಲಕಿ ಯರ ಶಾಲೆಯನ್ನು ತೆರೆಯಲಾಯಿತು. ಜಿಲ್ಲೆಯ ಎಲ್ಲಾ ಗ್ರಾಮೀಣ ಭಾಗಗಳಲ್ಲಿ ಸಾಮಾನ್ಯ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಯಿತು. ವಸತಿ ಶಾಲೆಗಳಲ್ಲಿಯೂ ಹೆಣ್ಣುಮಕ್ಕಳ ಸೇರ್ಪಡೆಗೆ ಅವಕಾಶವಿತ್ತು. ೧೮೪೪ ರ ಹೊತ್ತಿಗೆ ವಸತಿ ಶಾಲೆಯಲ್ಲಿ ದಾಖಲಾದ ಹೆಣ್ಣು ಮಕ್ಕಳ ಸಂಖ್ಯೆ ಇಪ್ಪತ್ತಮೂರಕ್ಕೆ ಏರಿತು ಮತ್ತು ೧೮೫೬ ರಲ್ಲಿ ಸಾಮಾನ್ಯ ಶಾಲೆಯಲ್ಲಿ ದಾಖಲಾದ ಹೆಣ್ಣುಮಕ್ಕಳ ಸಂಖ್ಯೆ ಒಂಭತ್ತು ಆಗಿತ್ತು. ೧೮೮೬ ರ ಹೊತ್ತಿಗೆ ಬಾಸೆಲ್ ಮಿಶನ್ ಶಿಕ್ಷಣ ಸಂಸ್ಥೆಗಳ ಸಂಖ್ಯೆ ೧೦೦ ಕ್ಕೇರಿತು ಗ್ರಾಮೀಣ ಪ್ರದೇಶಗಳಲ್ಲಿಯೂ ದೇಶಿಯ ಶಾಲೆಗಳನ್ನು ತೆರೆಯಲಾಯಿತು. ಒಟ್ಟು ೨೦೬ ಹುಡುಗಿಯರು ಶಾಲೆಯಲ್ಲಿ ಸೇರ್ಪಡೆಗೊಂಡರು. (೫)

ಸ್ತ್ರಿಯರನ್ನು ಶಿಕ್ಷಿತರನ್ನಾಗಿ ಮಾಡುವುದರಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು, ಆರಂಭಿಕ ಹಂತದಲ್ಲಿ ಜಿಲ್ಲೆಯ ಸಮಾಜ ಇದನ್ನು ಒಪ್ಪಿಕೊಳ್ಳಲಿಲ್ಲ, ಆಚರಿಸಿಕೊಂಡು ಬಂದ, ಸಂಪ್ರದಾಯ ಮತ್ತು ಕಟ್ಟುಪಾಡುಗಳು, ಸ್ತ್ರೀ ಶಿಕ್ಷಣದ ಬೆಳವಣಿಗೆಗೆ ತಡೆಯನ್ನುಂಟು ಮಾಡುತ್ತಿತ್ತು. ಈ ಬಗ್ಗೆ ಅರಿವು ಮೂಡಿಸಲು, ಇನ್ನೊಂದು ಮುಖ್ಯ ಕ್ರಮವನ್ನು ಕೈಗೊಳ್ಳಲಾಯಿತು. ಬೈಬಲ್ ಸ್ತ್ರೀಯರನ್ನು ಈ ಕಾರ್ಯಕ್ಕಾಗಿ ನೇಮಿಸಲಾಯಿತು.

ಬೈಬಲ್ ಸ್ತ್ರೀಯರು ಮನೆ ಮನೆಗೆ ತೆರಳಿ ಶಿಕ್ಷಣದ ಬಗ್ಗೆ ಸ್ತ್ರೀಯರಿಗೆ ಅರಿವು ಮೂಡಿಸುತ್ತಿದ್ದರು, ಆದರೆ ಕೆಲವು ಮನೆಗಳಲ್ಲಿ ಇವರನ್ನು, ಬಾಗಿಲಿನಿಂದಲೇ ಹೊರಕಳುಹಿಸಲಾಗುತ್ತಿತ್ತು. ಇದಕ್ಕೆ ವಿರುದ್ಧವಾಗಿ ಕೆಲವು ಮನೆಗಳಲ್ಲಿ ಇವರುಗಳನ್ನು ಆದರದಿಂದ ಸ್ವಾಗತಿಸುತ್ತಿದ್ದರು ಮತ್ತು ಸ್ತ್ರೀಯರೊಡನೆ ಮಾತನಾಡಲು ಅವಕಾಶ ಮಾಡಿಕೊಡುತ್ತಿದ್ದರು. ಈ ಸಂದರ್ಭದಲ್ಲಿ ಬೈಬಲ್ ಸ್ತ್ರೀಯರು ಕ್ರಿಶ್ಚಿಯನ್ ಧರ್ಮದ ಬಗ್ಗೆಯೂ ಪ್ರಚಾರ ನೀಡುತ್ತಿದ್ದರು. ಬೈಬಲ್ ಸ್ತ್ರೀಯರ ಭೇಟಿಯ ಪರಿಣಾಮವಾಗಿ ಕೆಲವು ಹೆತ್ತವರು ತಮ್ಮ ಮಗಳಂದಿರನ್ನು ಶಾಲೆಗೆ ಕಳುಹಿಸಲು ಒಪ್ಪಿಗೆ ಸೂಚಿಸಿದರು. ಆದರೆ ಕ್ರಿಶ್ಚಿಯ ಧರ್ಮದ ಬಗ್ಗೆ ಅವರು ಆಸಕ್ತಿ ತೋರಿಸಲಿಲ್ಲ(೬)

ಮಹಿಳೆಯರಿಗೆ ಔದ್ಯೋಗಿಕ ಶಿಕ್ಷಣ ನೀಡುವ ಕಾರ್ಯದಲ್ಲಿ ಬಾಸೆಲ್ ಮಿಶನ್ ತೊಡಗಿಸಿ ಕೊಂಡಿತು. ಮಂಗಳೂರಿನಲ್ಲಿ ಶಾಲಾ ಅವಧಿಯ ನಂತರ ಸಂಬಂಧ ಪಟ್ಟ ಮಿಶನರಿ ಮಹಿಳೆಯರು ಕೈಗಾರಿಕಾ ತರಬೇತಿ, ತೋಟಗಾರಿಕಾ ತರಬೇತಿ, ಹೊಲಿಗೆ, ಕಸೂತಿ, ಬುಟ್ಟಿ ತಯಾರಿಕೆ, ಅಡಿಗೆ ಕೆಲಸದಲ್ಲಿಯೂ ತರಬೇತಿಯನ್ನು ನೀಡಲು ಪ್ರಾರಂಭಿಸಿದರು. ಅನಾಥ ಹೆಣ್ಣುಮಕ್ಕಳ ಪೋಷಣೆ ಮತ್ತು ವಿದ್ಯಾಭ್ಯಾಸಕ್ಕಾಗಿ ಮುಲ್ಕಿಯಲ್ಲಿ ಒಂದು ಅನಾಥಾಲಯವನ್ನು ತೆರೆಯಲಾಯಿತು. ಇಲ್ಲಿ ಅಕ್ಷರ ಜ್ಞಾನದ ಜೊತೆಗೆ ಔದ್ಯೋಗಿಕ ತರಬೇತಿಯನ್ನು ನೀಡಲಾಗುತ್ತಿತ್ತು. (೭)

ವೈದ್ಯಕೀಯ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದ ಸ್ತ್ರೀಯರಿಗೆ ನೆರವಾಗುವ ಉದ್ದೇಶದಿಂದ ಉಡುಪಿಯಲ್ಲಿ ಸ್ಥಾಪಿಸ್ಪಟ್ಟಿದ್ದ ಲಂಬಾರ್ಡ್ ಮೆಮೋರಿಯಲ್ ಆಸ್ಪತ್ರೆಯಲ್ಲಿ ಹೆರಿಗೆಯ ವಾರ್ಡನ್ನು ತೆರೆಯಲಾಯಿತು ೧೯೨೩ ರಲ್ಲಿ ದಾದಿಯರ ಶಿಕ್ಷಣ ಸಂಸ್ಥೆಯನ್ನು ಇಲ್ಲಿ ತೆರೆಯಲಾಗಿತ್ತು. ಇದರ ಮುಖ್ಯ ಉದ್ದೇಶ ಸ್ತ್ರೀಯರಿಗೆ ಹೆರಿಗೆಯ ಸಂದರ್ಭದಲ್ಲಿ ಶುಶ್ರೂಷೆಯನ್ನು ನೀಡುವುದಾಗಿತ್ತು. (೮)

ಜರ್ಮನ್ ಮೂಲಕ ಬಾಸೆಲ್ ಮಿಶಲ್ ಸ್ತ್ರೀ ಶಿಕ್ಷಣದ ಪ್ರಗತಿಗೆ ಹೆಚ್ಚಿನ ಕಾಣಿಕೆಯನ್ನು ನೀಡಿದೆ. ಔದ್ಯೋಗಿಕ ತರಬೇತಿ ನೀಡಿ ಸ್ತ್ರೀಯರನ್ನು ಆರ್ಥಿಕವಾಗಿ ಸಬಲರನ್ನಾಗಿ ಮಾಡುವುದರಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ವಿಯಾಗಿದೆ.

**ಆ) ಸ್ತ್ರೀ ಶಿಕ್ಷಣಕ್ಕೆ ಕ್ಯಾಥೋಲಿಕರ ಕೊಡುಗೆಗಳು:**

ಹತ್ತೊಂಭತ್ತನೇ ಶತಮಾನದ ಉತ್ತರಾರ್ಧದಲ್ಲಿ ಬಾಸೆಲ್ ಮಿಶನ್ ಶಿಕ್ಷಣ ಸಂಸ್ಥೆಗಳಿಗೆ ಸ್ಪರ್ಧಿಗಳಾಗಿ ಕ್ಯಾಥೋಲಿಕ್ ಶಿಕ್ಷಣ ಸಂಸ್ಥೆಗಳು ಹುಟ್ಟಿಕೊಂಡವು. ಸ್ತ್ರೀಯರ ಪ್ರಾಥಮಿಕ, ಮಾಧ್ಯಮಿಕ ಮತ್ತು ಉನ್ನತ ಶಿಕ್ಷಣವನ್ನು ಈ ಜಿಲ್ಲೆಯಲ್ಲಿ ಇವರು ಪೋಷಿಸಿದ್ದಾರೆ. ಈ ದಿಶೆಯಲ್ಲಿ ಮೊದಲ ಕಾರ್ಯ ನಿರ್ವಹಿಸಿದ ಕೀರ್ತಿ ಕಾರ್ಮೆಲ್ ಸನ್ಯಾಸಿನಿಯರಿಗೆ ಸಲ್ಲುತ್ತದೆ. ಬಾಲಕಿಯರಿಗಾಗಿ ಅವರು ತೆರೆದ ಮೊದಲ ಶಾಲೆ ಸ್ಪೆಂಟ್ ಆನ್ಸ್ ಸ್ಕೂಲ್ (೧೮೭೦). ೧೮೭೦–೧೮೭೧ ರ ಪರಿವೀಕ್ಷಣಾ ವರದಿಯಂತೆ ಈ ಶಾಲೆಯಲ್ಲಿ ದಾಖಲಾದ ವಿದ್ಯಾರ್ಥಿನಿಯರ ಸಂಖ್ಯೆ ೪೦ ಆಗಿತ್ತು.(೯) (ಕ್ರಿಶ್ಚಿಯನ್ ಇಂಪಾಕ್ಟ್ ಇನ್ ಸೌತ್ ಕೆನರಾ) ಸ್ತ್ರೀಯರ ಮಾಧ್ಯಮಿಕ ಹಾಗೂ ಉನ್ನತ ಶಿಕ್ಷಣವನ್ನು ಬೆಳೆಸುವಲ್ಲಿಯೂ ಕ್ಯಾಥೋಲಿಕ್‌ರು ವಿಶೇಷ ಪ್ರಯತ್ನಗಳನ್ನು ಮಾಡಿರುತ್ತಾರೆ. ಸೈಂಟ್ ಆನ್ಸ್ ಬಾಲಕಿಯರ ಶಾಲೆಯನ್ನು ಮಾಧ್ಯಮಿಕ ಶಿಕ್ಷಣ ಸಂಸ್ಥೆಯನ್ನಾಗಿ ಭಡ್ತಿಗೊಳಿಸಲಾಯಿತು. ೧೮೯೦ ರಲ್ಲಿ ಇದಕ್ಕೆ ಶಿಕ್ಷಣ ತರಬೇತಿ ವಿಭಾಗವನ್ನು ಸೇರಿಸಲಾಯಿತು. ಇದಕ್ಕೆ ಸರಕಾರದಿಂದ ವೇತನ ಅನುದಾನವೂ ದೊರೆಯಿತು. ಇದರಲ್ಲಿದೆ ಮಂಗಳೂರಿನ ಹಂಪನಕಟ್ಟೆಯಲ್ಲಿ ಕ್ಯಾಥೋಲಿಕ್ ಬಾಲಕಿಯರಿಗೆ ಮತ್ತು ಹಿಂದೂ ಬಾಲಕಿಯರಿಗೆ ಬೇರೆಬೇರೆ ಶಾಲೆಗಳನ್ನು ತೆರೆದರು. (೧೦)

ಮದರ್ ಮೇರಿ ಡಿ. ಡ ಅಂಜೇಸ್ ಅವರು ತಮ್ಮ ಸಂಸ್ಥೆಯಿಂದ ಶಿಕ್ಷಣವು ಎಲ್ಲಾ ವರ್ಗದವರಿಗೂ ತಲುಪಬೇಕು ಎನ್ನುವ ದೃಷ್ಟಿಯಿಂದ ೧೮೭೫ ರಲ್ಲಿ ಒಂದು ಕನ್ನಡ ಮಾಧ್ಯಮ ಶಾಲೆಯನ್ನು ತೆರೆದರು. ಮಂಗಳೂರಿನ ರಥಬೀದಿಯಲ್ಲಿಯೂ ಒಂದು ಶಾಲೆಯನ್ನು ಪ್ರಾರಂಭಿಸಲಾಯಿತು. ೧೯೨೧ ರಲ್ಲಿ ಈ ಶಾಲೆಯನ್ನು ಉರ್ವಾಕ್ಕೆ ಸ್ಥಾಳಾಂತರಿಸಿ ಲೇಡಿಹಿಲ್ ವಿಕ್ಟೋರಿಯಾ ಹೈಸ್ಕೂಲ್ ಎಂದು ನಾಮಕರಣ ಮಾಡಲಾಯಿತು. ೧೯೧೮ ರಲ್ಲಿ ಉಡುಪಿಯಲ್ಲಿ ಸೈಂಟ್ ಸಿಸಿಲೀಸ್ ಶಾಲೆಯನ್ನು ತೆರೆಯಲಾಯಿತು. ಮೊಗವೀರ ಮಕ್ಕಳಿಗೆ ಶಿಕ್ಷಣವನ್ನು ನೀಡುವ ಉದ್ದೇಶದಿಂದ ಉಳ್ಳಾಲದಲ್ಲಿಯೂ ಒಂದು ಶಾಲೆಯನ್ನು ತೆರೆಯಲಾಯಿತು. (೧೧)

೧೯೩೦ ರ ದಶಕದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಇನ್ನೂ ಕೆಲವು ಸಂಸ್ಥೆಗಳ ಸೇರ್ಪಡೆಯಾಯಿತು. ೧೯೩೦ ರಲ್ಲಿ ಕುಂದಾಪುರದಲ್ಲಿ ಒಂದು ಶಾಲೆ ಮತ್ತು ಚಿಲ್ಡ್ರನ್ ಹೋಂ ಗಳ ಸ್ಥಾಪನೆ ಕಲ್ಯಾಣಪುರ ಮಿಲಾಗ್ರೀಸ್ ಹೈಸ್ಕೂಲ್‌ಗೆ ಬಾಲಕಿಯರ ವಿಭಾಗದ ಸೇರ್ಪಡೆ ಇವು ಕ್ಯಾಥೋಲಿಕ್ ಸಂಸ್ಥೆಗಳ ಇತರ ಕೊಡುಗೆಗಳು. (೧೨)

ಕಾರ್ಮೆಲ್ ಸನ್ಯಾಸಿನಿಯರು ಪ್ರಾರಂಭಿಸಿದ್ದ ಸೆಂಟ್ ಆನ್ಸ್ ಶಾಲೆ ೧೯೨೧ ರಲ್ಲಿ ಬೆಂದೂರಿಗೆ ವರ್ಗಾವಣೆಗೊಂಡು ಸ್ತ್ರೀಯರ ಉನ್ನತ ಶಿಕ್ಷಣ ಸಂಸ್ಥೆಯಾಗಿ ಬೆಳವಣಿಗೆಯನ್ನು ಕಂಡಿತು. ಮಂಗಳೂರಿನ ಬೆಂದೂರಿನಲ್ಲಿ ಮದರ್ ಅಲೋಶಿಯಸ್ ಅವರ ಮಾರ್ಗದರ್ಶನದಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯಕ್ಕೆ ಸೇರ್ಪಡೆಗೊಂಡು ಸೆಂಟ್ ಆಗ್ನೆಸ್ ಕಾಲೇಜು (ಇಂಟರ್ ಮೀಡಿಯಟ್) ಪ್ರಾರಂಭವಾಯಿತು. ದಕ್ಷಿಣ ಕನ್ನಡದಲ್ಲಿ ಸ್ತ್ರೀಯರ ಪ್ರಥಮ ಉನ್ನತ ಶಿಕ್ಷಣ ಸಂಸ್ಥೆ ಎಂಬ ಕೀರ್ತಿಗೆ ಇದು ಪಾತ್ರವಾಯಿತು. ೧೯೨೪ ರಲ್ಲಿ ಇದು ಪ್ರಥಮ ದರ್ಜೆ ಕಾಲೇಜು ಆಗಿ ಭಡ್ತಿಗೊಂಡಿತು – ಕ್ರಿಶ್ಚಿಯನ್ ಇಂಪಾಕ್ಟ್ – ಇನ್ – ಸೌತ್ ಕೆನರಾ – ಕ್ರಾಂತಿ – ಕೆ – ಫೆರಿಯಸ್). (೧೩) ಆಗ ಇಲ್ಲಿ ಸೇರ್ಪಡೆ ಗೊಂಡ ಹುಡುಗಿಯರ ಸಂಖ್ಯೆ ೧೨ **(೧೩).**

ಕ್ಯಾಥೋಲಿಕ್ ಶಿಕ್ಷಣ ಸಂಸ್ಥೆಗಳು ಉನ್ನತ ವರ್ಗದ ಸ್ತ್ರೀಯರನ್ನು ಹೆಚ್ಚು ಆಕರ್ಷಿಸಿದವು ಇಲ್ಲಿ ಕಲಿಕಾ ಮಾಧ್ಯಮ ಆಂಗ್ಲ ಭಾಷೆಯಲ್ಲಾಗಿತ್ತು. ಇಲ್ಲಿ ಶಿಕ್ಷಣ ಪಡೆದುಕೊಂಡವರು ಪ್ರತಿಷ್ಠಿತರೆನಿಸಿಕೊಳ್ಳುತ್ತಿದ್ದರು. ಶಿಕ್ಷಣ ಸಂಸ್ಥೆಗಳನ್ನು ಆಯ್ದುಕೊಳ್ಳುವ ಕ್ರಮವೂ ಪ್ರಾರಂಭವಾಯಿತು. ಹೆಣ್ಣುಮಕ್ಕಳಿಗೆ ಎಂತಹ ಶಾಲೆಗಳಾದರೆ ಒಳಿತು ಅಲ್ಲಿನ ಪಠ್ಯಕ್ರಮ ಹೇಗಿದ್ದರೆ ಸೂಕ್ತ, ಕಲಿಕೆಯ ಮಾಧ್ಯಮದ ಭಾಷೆ ಯಾವುದಿರಬೇಕು ಎಂಬ ಅನಿಸಿಕೆಗಳಿಗೆ ಅವಕಾಶವಿದ್ದುದರಿಂದ ಶಿಕ್ಷಣ ಬಗ್ಗೆ ಅವರಿಗೆ ಹಿಂದಿದ್ದ ಹಿಂಜರಿಕೆಗಳು ಇಲ್ಲವಾದವು.

**<u>ಇ) ಸರಕಾರೀ ಶಿಕ್ಷಣ ಸಂಸ್ಥೆಗಳು</u>**

ಜಿಲ್ಲೆಯಲ್ಲಿ ೧೮೫೪ ರ ಚಾಲ್ಸ್ ವುಡ್ ಆಯೋಗದ ವರದಿಯ ನಂತರ ಶಿಕ್ಷಣಕ್ಕೆ ಹೊಸ ಆಯಾಮ ದೊರೆಯಿತು. ಮದ್ರಾಸ್ ಪ್ರಾಂತ್ಯದ ಶಿಕ್ಷಣ ಇಲಾಖೆಯು ಜಿಲ್ಲೆಯ ಶಿಕ್ಷಣಕ್ಕೆ ಸ್ಪಷ್ಟ ರೂಪುರೇಷೆಗಳನ್ನು ಸಿದ್ಧಪಡಿಸಿತು. ೧೮೫೫ – ೧೯೪೭ ರ ನಡುವೆ ಜಿಲ್ಲಾ ಕೇಂದ್ರ ಮತ್ತು ಹೊರವಲಯಗಳಲ್ಲಿ ಪ್ರಾಥಮಿಕ, ಮಾಧ್ಯಮಿಕ ಮಹಾವಿದ್ಯಾಲಯಗಳನ್ನು ತೆರೆಯಿತು. ೧೮೬೭ ರಲ್ಲಿ ಮಂಗಳೂರಿನಲ್ಲಿ ಸರಕಾರೀ ಶಾಲೆಯನ್ನು ತೆರೆಯಲಾಯಿತು. ಇದಕ್ಕಾಗಿ ಮಂಗಳೂರಿನ ಜನರು ರೂ. ೬೫,೦೦೦/– ವನ್ನು ಸಂಗ್ರಹಿಸಿ ನೀಡಿದ್ದರು. ೧೮೬೯ ರಲ್ಲಿ ಇದನ್ನು ಎರಡನೇ ದರ್ಜೆಯ ಕಾಲೇಜಿಗಾಗಿ ಭಡ್ತಿಗೊಳಿಸಲಾಯಿತು. ೧೯೦೨ ನೇ ಇಸವಿಯಿಂದ ಹುಡುಗಿಯರ ಸೇರ್ಪಡೆಯನ್ನು ಪ್ರಾರಂಭಿಸಲಾಯಿತು. (೧೪)

ಮೇಲಿನ ಕ್ರಮಗಳಿಂದಾಗಿ ಜಿಲ್ಲೆಯಲ್ಲಿ ವಿದ್ಯಾಭ್ಯಾಸದತ್ತ ಒಲವು ಪ್ರಾರಂಭವಾಯಿತು. ೧೮೮೧–೯೧ ರ ಸಮೀಕ್ಷೆಯಂತೆ ಹದಿನೈದು ಮತ್ತು ಅದಕ್ಕಿಂತ ಹೆಚ್ಚಿನ ವಯಸ್ಸಿನವರಲ್ಲಿ ೮೨.೨

ಗಂಡಸರು ಅಶಿಕ್ಷಿರಾಗಿದ್ದರು ಮತ್ತು. ೯೯.೦೨ ಹೆಂಗಸರು ಅಶಿಕ್ಷಿತರಾಗಿದ್ದರು. ಈ ಸಮೀಕ್ಷೆ ಕಾಸರಗೋಡನ್ನೂ ಒಳಗೊಂಡಿತ್ತು – ಆಗ ಇದು ದಕ್ಷಿಣ ಕನ್ನಡದ ಭಾಗವಾಗಿತ್ತು. ೧೯೨೧ ರ ಸಮೀಕ್ಷೆಯಂತೆ ಶೇಕಡಾ ೧೬.೨ ಪುರುಷರು ಶಿಕ್ಷಿತರಾದರು ಮತ್ತು ಶೆಕಡಾ ೩.೮ ಸ್ತ್ರೀಯರು ಶಿಕ್ಷಿತರಾದರು. (೧೫)

**೧೯೨೧ ರ ಜನಗಣತಿಯ ವರದಿಯಂತೆ ಜಿಲ್ಲೆಯ ಕೆಲವು ತಾಲೂಕುಗಳ ಶಿಕ್ಷಿತರ ಪಟ್ಟಿ.**

| **ತಾಲೂಕು** | **ಶಿಕ್ಷಿತರ ಸಂಖ್ಯೆ ಪುರುಷರು** | **ಮಹಿಳೆಯರು** | **ಪ್ರತಿ ಸಾವಿರಕ್ಕೆ ಪುರುಷರು** | **ಪ್ರತಿ ಸಾವಿರಕ್ಕೆ ಮಹಿಳೆಯರು** |
|---|---|---|---|---|
| ೧) ಕುಂದಾಪುರ | ೯೫೮೩ | ೮೧೦ | ೧೪೭ | ೧೧ |
| ೨) ಕಾರ್ಕಳ | ೧೦೧೧೪ | ೧೫೮೬ | ೧೫೧ | ೨೨ |
| ೩) ಉಡುಪಿ | ೧೭೬೫೨ | ೨೮೧೪ | ೧೭೫ | ೨೬ |
| ೪) ಮಂಗಳೂರು | ೨೯೪೨೨ | ೮೦೧೧ | ೧೯೭ | ೫೨ |
| ೫) ಉಪ್ಪಿನಂಗಡಿ | ೧೧೪೪೮ | ೧೮೭೩ | ೧೧೮ | ೭೯ |

(೧೬)

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಕೇವಲ ಬೆರಳೆಣಿಕೆಯಷ್ಟು ಮಹಿಳೆಯರು ಮಾತ್ರ ಶಿಕ್ಷಣದತ್ತ ಒಲವು ತೋರುತ್ತಿದ್ದರೆಂದು ಕಂಡುಬರುತ್ತದೆ.

## ಈ) ಪಾಶ್ಚಾತ್ಯ ಶಿಕ್ಷಣದ ಪ್ರಭಾವ:

ಪಾಶ್ಚಾತ್ಯ ಶಿಕ್ಷಣದಿಂದಾಗಿ ಸಾಂಪ್ರದಾಯಿಕ ಸಮಾಜವು ಆಧುನಿಕವಾಗಿ ಪರಿವರ್ತಿತವಾಗುವ ಪ್ರಕ್ರಿಯೆ ಚುರುಕುಗೊಂಡಿತು. ಮಹಿಳೆಯರನ್ನು ಶಿಕ್ಷಣ ಸಬಲರಾಗಿಸುವುದೆಂಬ ಅಭಿಪ್ರಾಯ ರೂಪುಗೊಳ್ಳಲು ಪ್ರಾರಂಭವಾಯಿತು. ಸೂಕ್ತ ಶಿಕ್ಷಣ ಪಡೆದ ಸ್ತ್ರೀ ಉತ್ತಮ ಸತಿ ಹಾಗೂ ತಾಯಿಯಾಗಬಲ್ಲಳು ಎಂಬ ಭಾವನೆ ರೂಪುಗೊಂಡಿತು. ಹತ್ತೊಂಭತ್ತನೇ ಶತಮಾನದ ವರೆಗೆ ಮಗಳಿಗೆ ಒಳ್ಳೆಯ ಗೃಹಿಣಿ ಎನಿಸಲು ತಾಯಿಯೇ ತರಬೇತಿ ನೀಡುತ್ತಿದ್ದಳು. ಆದರೀಗ ಆಧುನಿಕತೆಯು ತನ್ನ ಅನೇಕ ಸಂಕೀರ್ಣ ಸ್ವರೂಪ ಗಳೊಂದಿಗೆ ಬದುಕಿನೊಳಗೆ ಪ್ರವೇಶಿಸುತ್ತಾ ಇನ್ನಷ್ಟು ಕ್ರಮ ಬದ್ಧವಾದ, ವ್ಯವಸ್ಥಿತವಾದ ತರಬೇತಿಯನ್ನು ಸ್ತ್ರೀಯು ಪಡೆದುಕೊಳ್ಳುವಂತೆ ಮಾಡಿತು. ಸ್ತ್ರೀಯೊಬ್ಬಳೂ ಪುರುಷನಷ್ಟೇ ಬೌದ್ಧಿಕ ಸಾಮರ್ಥ್ಯ ಮತ್ತು ಮಾನಸಿಕ ಧಾರ್ಷ್ಟ್ಯವನ್ನು ಪಡೆದುಕೊಂಡಳು. ಇಂತಹ ಒಂದು ಪರಿವರ್ತನೆಗೆ ಪಾಶ್ಚಾತ್ಯ ಶಿಕ್ಷಣವೇ ಕಾರಣವೆಂದರೆ ತಪ್ಪಾಗಲಾರದು. ಹತ್ತೊಂಭತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಚಿಂತನಾ ಸಾಮರ್ಥ್ಯವನ್ನು ಪಡೆದುಕೊಂಡ ನವ ಮಹಿಳೆಯ ಉದಯವಾಯಿತು.

**ಅಡಿಟಿಪ್ಪಣಿಗಳು**

| | | |
|---|---|---|
| ೧) ಸ್ಯಾಮ್ಯುಯಲ್ ಮಿಲೆ | – | ಕೆನರಾ ಪಾಸ್ಟ್ ಅಂಡ್ ಪ್ರೆಸೆಂಟ್–ಬಾಸಲ್ ಮಿಶನ್ ಸೊಸೈಟಿ – ಪು.ಸಂ. ೨೭ |
| ೨) ಕೆ. ಅಭಿಶಂಕರ್ | – | ಕರ್ನಾಟಕ ಗಝೆಟಿಯರ್– ಸೌತ್ ಕೆನರಾ – ಪು.ಸ. ೫೪೬. |
| ೩) ಪದ್ಮ ಶ್ರೀ | – | ಎಜುಕೇಶನ್ ಫ್ರಂ ಬಾಸೆಲ್ ಮಿಶನ್ – ಎಂ.ಫಿಲ್ ನಿಬಂಧ – ಪು.ಸ.೫೧,<br>ಬಾಸೆಲ್ ಮಿಶನ್ ರಿಪೋರ್ಟ್ – ೧೮೫೮, ಪು.ಸ.೪೧ |
| ೪) ವರ್ತಮಾನ ಪತ್ರಿಕೆ | – | ಸುಭೋದಿನಿ ೧೫ ಜುಲೈ ೧೮೭೧ |
| ೫) ಪದ್ಮಶ್ರೀ | – | ಎಜುಕೇಶನ್ ಫ್ರಂ ಬಾಸಿನ್ ಮಿಶನ್ – ಪು.ಸಂ. ೫೩ |
| ೬) ಪದ್ಮಶ್ರೀ | – | ಎಜುಕೇಶನ್ ಫ್ರಂ ಬಾಸೆಲ್ ಮಿಶನ್ – ಪು.ಸ. ೫೩ |
| ೭) ವಿಜಯ ಕುಮಾರ್ | – | ಕರ್ನಾಟಕದಲ್ಲಿ ಪ್ರೊತೆಸ್ತಾಂತ ಮಿಶನರಿಗಳ ಚರಿತ್ರೆ – ಪು.ಸ.೧೧೭ |
| ೮) ಪದ್ಮಶ್ರೀ | – | ಎಜುಕೇಶನ್ ಫ್ರಂ ಬಾಸೆಲ್ ಮಿಶನ್ – ಪು.ಸ. ೫೩ |
| ೯) ಕ್ರಾಂತಿ ಫೆರಿಯಾಸ್ | – | ಎಜುಕೇಶನ್ ಇನ್ ಸೌತ್ ಕೆನರಾ – ಪು.ಸ.೧೧೦ |
| ೧೦) ಕ್ರಾಂತಿ ಫೆರಿಯಾಸ್ | – | –ಅದೇ– ಪು.ಸ.೧೧೦ |
| ೧೧) ಸಿಸ್ಟರ್ ಹೆಡ್ವಿಜ್ | – | ದ ಕಾಂಟ್ರಿಬ್ಯೂಷನ್ ಆಫ್ ದಿ ಅಪೊಸ್ಟೋಲಿಕ್ ಕಾರ್ಮೆಲ್ ಟು ಎಜುಕೇಶನ್ ಇನ್ ಸೌತ್ ಕೆನರಾ ಪು.ಸ.೪೮ |
| ೧೧) ಸಿಸ್ಟರ್ ಹೆಡ್ವಿಜ್ | – | ಅದೇ – ಪು.ಸ.೪೯ |
| ೧೨) ಸಿಸ್ಟರ್ ಹೆಡ್ವಿಜ್ | – | ಅದೇ – ಪು.ಸ.೪೯ |
| ೧೩) ಕೆ ಅಭಿಶಂಕರ್ | – | ಕರ್ನಾಟಕ ಗಝೆಟಿಯರ್– ಸೌತ್ ಕೆನರಾ–ಪು.ಸ.೫೪೬ |
| ೧೪), ೧೫), ೧೬) ಕೆ. ಅಭಿಶಂಕರ್ | – | ಕರ್ನಾಟಕ ಗಝೆಟಿಯರ್ – ಸೌತ್ ಕೆನರಾ–ಪು.ಸ.೫೪೬ –೬೦೬ |

# ಅಧ್ಯಾಯ – ೪

# ಸ್ತ್ರೀ ವಿಮೋಚನೆ – ಸಮಾಜ ಸುಧಾರಣಾ ಸಂಘಗಳ ಪಾತ್ರ

ಅ) ಬ್ರಹ್ಮ ಸಮಾಜ

ಆ) ಆರ್ಯ ಸಮಾಜ

ಇ) ಥಿಯೋಸೋಫಿಕಲ್ ಸೊಸೈಟಿ

ಈ) ಸ್ತ್ರೀ ವಿಮೋಚನಾಗಾರ್ತಿ ಪಂಡಿತಾ ರಮಾಬಾಯಿ

ಉ) ಸ್ತ್ರೀ ವಿಮೋಚನೆಗೆ–ಕುದ್ಮಲ್ ರಂಗರಾವ್ ಅವರ ಕೊಡುಗೆಗಳು

# ಅಧ್ಯಾಯ – ೪

## ಸ್ತ್ರೀವಿಮೋಚನೆ – ಸಮಾಜ ಸುಧಾರಣಾ ಸಂಘಗಳ ಪಾತ್ರ

ಮಹಿಳೆಯ ಪರಿಸ್ಥಿತಿಯನ್ನು ಸುಧಾರಿಸಲು ಪುರುಷ ಸುಧಾರಣಾವಾದಿಗಳೇ ಹೆಚ್ಚಾಗಿ ಪ್ರಯತ್ನಿಸಿದ್ದರು. ಭಾರತದುದ್ದಕ್ಕೂ ಈ ದಿಶೆಯಲ್ಲಿ ಕಾರ್ಯನಿರ್ವಹಿಸುವ ಬೇರೆ ಬೇರೆ ಸಂಘ ಸಂಸ್ಥೆಗಳು ಕ್ರಮೇಣ ಹುಟ್ಟಿಕೊಂಡವು. ಪ್ರಗತಿಪರ ಚಿಂತನೆಗಳು ಮತ್ತು ಆಧುನಿಕ ವಿದ್ಯಭ್ಯಾಸ ವ್ಯವಸ್ಥೆಗಳಿಂದ ಇವು ಸಾಧ್ಯವಾದವು. ಮಹಿಳೆಯರ ಶೋಷಣೆಯ ವಿರುಧ್ದ ಹೋರಾಡಿದ ಮೊದಲ ಸುಧಾರಣ ಸಂಸ್ಥೆ ಬ್ರಹ್ಮ ಸಮಾಜ. ನಂತರ ಆರ್ಯ ಸಮಾಜ ಮತ್ತು ಥಿಯೋಸೋಫಿಕಲ್ ಸೋಸೈಟಿಗಳು ದಕ್ಷಿಣ ಕನ್ನಡದಲ್ಲಿ ಸ್ತ್ರೀ ವಿಮೋಚನೆಗಾಗಿ ಹೋರಾಡಿದ್ದವು.

**ಅ) ಬ್ರಹ್ಮ ಸಮಾಜ:**

ರಾಜರಾಂ ಮೋಹನ್ ರಾಯ್ ಅವರ ಬ್ರಹ್ಮ ಸಮಾಜ ೧೮೭೦ ರಿಂದ ಮಂಗಳೂರಿನಲ್ಲಿ ತನ್ನ ಚಟುವಟಿಕೆಯನ್ನು ಪ್ರಾರಂಭಿಸಿತು. ಈ ಜಿಲ್ಲೆಯ ಕೇಂದ್ರ ಸ್ಥಾನವಾದ ಮಂಗಳೂರಿನಲ್ಲಿ ಸಮಾಜದ ಚಟುವಟಿಕೆಗಳನ್ನು ಕಾಳಜಿ ವಹಿಸಿ ಪ್ರಾರಂಭಿಸಿದವರು ಬಿಲ್ಲವ ಸಮಾಜದ ನಾಯಕರಾದ ಎನ್. ಅರಸಪ್ಪ ಮತ್ತು ಉಳ್ಳಾಲ ರಘುನಾಥಯ್ಯ. ಅರಸಪ್ಪ ಅವರ ಕೇಳಿಕೆಯಂತೆ ಬ್ರಹ್ಮ ಸಮಾಜದ ಶಾಖೆಯ ಸ್ಥಾಪನೆಯ ಬಗ್ಗೆ ಪರಿವೀಕ್ಷಣೆಯ ನಡೆಸಲು ಕಲ್ಕತ್ತಾದಿಂದ ಪಿ.ಸಿ. ಮುಜುಂದಾರ್, ಗೋವಿಂದರಾಯ್ ಮತ್ತು ಅಮೃತ್ ಲಾಲ್ ಬೋಸ್ ಎಂಬ ಮೂವರು ಪ್ರತಿನಿಧಿಗಳು ಮಂಗಳೂರಿಗೆ ಆಗಮಿಸಿದ್ದರು. ಮೇ. ೧೮೭೦ ರಲ್ಲಿ ಅರಸಪ್ಪ ಅವರ ಮನೆಯಲ್ಲಿಯೇ ಬ್ರಹ್ಮ ಸಮಾಜದ ಶಾಖೆಯನ್ನು ತೆರೆಯಲಾಯಿತು. (೧)

ಅರಸಪ್ಪ ಅವರ ಬ್ರಹ್ಮ ಸಮಾಜದ ಶಾಖೆಗೆ ಸೇರಲು ಇಚ್ಛಿಸದ ಕೆಲವು ಸಾರಸ್ವತ ಬ್ರಾಹ್ಮಣರು ಉಳ್ಳಾಲ ರಘುನಾಥಯ್ಯ ಅವರ ನೇತೃತ್ವದಲ್ಲಿ ಹನ್ನೊಂದು ಜೂನ್ ೧೮೭೦ ರಲ್ಲಿ ಬ್ರಹ್ಮ ಸಮಾಜದ ಇನ್ನೊಂದು ಶಾಖೆಯಾಗಿ – ಉಪಾಸನಾ ಮಂದಿರವನ್ನು ತೆರೆದರು.(೨) ಕಲ್ಕತ್ತಾದಿಂದ ಬಂದಿದ್ದ ಬ್ರಹ್ಮ ಸಮಾಜದ ಪ್ರತಿನಿಧಿಗಳು ಬ್ರಹ್ಮ ಸಮಾಜದ ಎರಡು ಶಾಖೆ ಗಳನ್ನು (ಬ್ರಹ್ಮ ಸಮಾಜ ಮತ್ತು ಉಪಾಸನಾ ಸಭಾ) ಬಿಟ್ಟು ಹೋದರು. ಈ ಎರಡೂ ಸಮಾಜಗಳು ಪ್ರಾರ್ಥನಾ ಸಭಾಗಳನ್ನು ನಡೆಸಿ ಜನರಲ್ಲಿ ಸಮಾಜದ ಪರಿವರ್ತನೆಗಾಗಿ ಹಲವು ಪ್ರಗತಿಪರ ಚಟುವಟಿಕೆಗಳನ್ನು

ಹಮ್ಮಿಕೊಂಡಿದ್ದರು. ಇವರಿಗೆ ಸಾಂಪ್ರದಾಯಿಕ ಜನರಿಂದ ತೀವ್ರ ವಿರೋಧ ವ್ಯಕ್ತವಾಯಿತು. ಅರಸಪ್ಪ ಅವರ ಸಮಾಜ ಕೇವಲ ಆರು ವರ್ಷಗಳ ಕಾಲವಷ್ಟೆ ಕಾರ್ಯ ನಿರ್ವಹಿಸಿತು. (೧೮೭೦–೧೮೭೬)

ಆದರೆ ಉಳ್ಳಾಲ ರಘುನಾಥಯ್ಯನವರಿಂದ ಸ್ಥಾಪಿಸಲ್ಪಟ್ಟ ಉಪಾಸನಾ ಸಭಾ ನಂತರವೂ ತನ್ನ ಕಾರ್ಯ ಚಟುವಟಿಕೆಗಳನ್ನು ಮುಂದುವರಿಸಲು ಶಕ್ತವಾಯಿತು. ತನ್ನ ಚಟುವಟಿಕೆಗಳನ್ನು ಸಕ್ರಿಯವಾಗಿ ಮುಂದುವರಿಸುತ್ತಾ ೧೯೦೩ ರಲ್ಲಿ ಅದು ತನ್ನ ಹೆಸರನ್ನು ಬ್ರಹ್ಮ ಸಮಾಜವೆಂದೇ ಅಂಗೀಕರಿಸಿತು. ಬಾಲಕಿಯರ ಶಿಕ್ಷಣಕ್ಕಾಗಿ ಒಂದು ಶಾಲೆಯನ್ನು ಅದು ತೆರೆದಿದ್ದರೂ ೧೯೧೦ ರಲ್ಲಿ ಅರ್ಥಿಕ ಕೊರತೆಯಿಂದ ಅದನ್ನು ಮುಚ್ಚಬೇಕಾಯಿತು. ಸ್ತ್ರೀಯರ ವಿಮೋಚನೆಗೆ ಸಂಬಂಧಪಟ್ಟಂತೆ ಬ್ರಹ್ಮ ಸಮಾಜವೂ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿತ್ತು. ಸ್ರೀ ಶಿಕ್ಷಣ, ಬಾಲ್ಯ ವಿವಾಹ ನಿಷೇದ, ವಿಧವಾ ವಿವಾಹಕ್ಕಾಗಿ ಬ್ರಹ್ಮ ಸಮಾಜ ಪ್ರಯತ್ನಿಸುತಿತ್ತು. ೧೯೦೭ ರಲ್ಲಿ ಅಂತಹ ಒಂದು ಪ್ರಾಮುಖ್ಯ ಘಟನೆ ನಡೆಯಿತು. ಉಳ್ಳಾಲ ರಘುನಾಥಯ್ಯನವರು ತಮ್ಮ ವಿಧವೆ ಮಗಳ ವಿವಾಹ ವನ್ನು ನ್ಯಾಯವಾದಿ ಹೆಚ್. ಬಾಲಕೃಷ್ಣ ರಾವ್ ಅವರ ಪುತ್ರನೊಂದಿಗೆ ನಡೆಸಿದರು. ಇದು ದಕ್ಷಿಣ ಜಿಲ್ಲೆಯ ಮೊದಲ ವಿಧವಾ ವಿವಾಹ. (೩)

ಅಮ್ಮೆಂಬಳ ಸುಬ್ಬರಾವ್ ಅವರು ಬ್ರಹ್ಮ ಸಮಾಜದ ಸದಸ್ಯ ಮತ್ತು ಪ್ರೇರಕರಾಗಿದ್ದರು. ಮಂಗಳೂರಿನ ಕೆನರಾ ಬಾಲಿಕೆಯರ ಶಾಲೆಯ ಸ್ಥಾಪನೆ ಸ್ತ್ರೀ ಶಿಕ್ಷಣಕ್ಕೆ ಇವರು ನೀಡಿದ ಕೊಡುಗೆ. ಹಿಂದುಳಿದ ವರ್ಗದವರ ಕಲ್ಯಾಣಕ್ಕಾಗಿ ದುಡಿದ ಕುದ್ಮಲ್ ರಂಗರಾವ್ ಅವರು, ಕರ್ನಾಡ್ ಸದಾಶಿವರಾಯರು, ಪರಮೇಶ್ವರಯ್ಯ, ಗಂಗೊಳ್ಳಿ ಕೃಷ್ಣ ರಾಯ ಮೊದಲಾದವರು ಬ್ರಹ್ಮ ಸಮಾಜದ ಮೂಲಕ ಇಪ್ಪತ್ತನೇ ಶತಮಾನದಲ್ಲಿ ಸಮಾಜ ಸುದಾರಣ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದರು. ಸರಸ್ವತಿ, ಲಲಿತಾ ಬ್ಯಾ, ಯಮುನಾ ಬ್ಯಾ ಎಂ. ಚಂದ್ರಮ್ಮ, ಇವರುಗಳು ಬ್ರಹ್ಮ ಸಮಾಜದ ಸ್ತ್ರಿ ಸದಸ್ಯೆಯಾಗಿದ್ದರು. (೪)

ಸ್ವಾತಂತ್ರ ನಂತರ ಬ್ರಹ್ಮ ಸಮಾಜದ ಚಟುವಟಿಕೆಗಳು ಕ್ಷೀಣಿಸತೊಡಗಿದವು. ಮಂಗಳೂರಿನ ಎನ್. ಎಸ್. ನಿವಾಸ್ ಮನೆತನದವರು ಸ್ವಲ್ಪಮಟ್ಟಿಗೆ ಮುಂದುವರಿಸಿದರು. ೧೮೭೦ ರಲ್ಲಿ ಸ್ಥಾಪನೆಗೊಂಡು ಸಮಾಜ ಸುಧಾರಣ ಕಾರ್ಯ ಚಟುವಟಿಕೆಗಳನ್ನು ಹಾಕಿಕೊಂಡ ಬ್ರಹ್ಮಸಮಾಜ ದಕ್ಷಿಣಕನ್ನಡದಲ್ಲಿ, ಸಾಮಾಜಿಕ ಪರಿವರ್ತನೆಗೆ ಮತ್ತು ಸ್ತ್ರೀ ವಿಮೋಚನೆಗೆ ತನ್ನದೇ ಆದ ಕಾಣಿಕೆಗಳನ್ನು ನೀಡಿದೆ. ಗಾಂಧೀಜಿಯವರ ಆಗಮನಕ್ಕಿಂತ ಮೊದಲೇ ದಕ್ಷಿಣ ಕನ್ನಡ

ಜಿಲ್ಲೆಯಲ್ಲಿ ದಲಿತೋದ್ಧಾರ ಮತ್ತು ಸ್ತ್ರೀ ವಿಮೋಚನ ಕಾರ್ಯಗಳು ಬ್ರಹ್ಮ ಸಮಾಜದ ಮೂಲಕ ನಡೆದದ್ದು ಒಂದು ಉಲ್ಲೇಖಾರ್ಹ ವಿಷಯವಾಗಿದೆ.

**ಆ) ಆರ್ಯ ಸಮಾಜ:**

ಜಿಲ್ಲೆಯ ಸಾಮಾಜಿಕ ಹಾಗು ಶೈಕ್ಷಣಿಕ ಪ್ರಗತಿಗೆ ಶ್ರಮಿಸಿದ ಇನ್ನೊಂದು ಮುಖ್ಯ ಅಖಿಲ ಭಾರತ ಮಟ್ಟದ ಸುಧಾರಣಾ ಸಂಘ ಆರ್ಯ ಸಮಾಜ. ದಯಾನಂದ ಸರಸ್ವತಿಯವರ ಆರ್ಯ ಸಮಾಜ ಜಿಲ್ಲೆಯ ಕೇಂದ್ರ ಸ್ಥಾನ ಮಂಗಳೂರಿನಲ್ಲಿ ೧೯೧೮ ರಲ್ಲಿ ತನ್ನ ಶಾಖೆಯನ್ನು ಸ್ವಾಮೀ ಶ್ರದ್ಧಾನಂದ ಅವರ ನೇತೃತ್ವದಲ್ಲಿ ತೆರೆಯಿತು. ಮೊದಲಾಗಿ ಇದು ಶ್ರೀ ಯುಸಿ.ಎಸ್. ಭಟ್ಟರ ಮನೆಯಲ್ಲಿಯೇ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿತು. ನಂತರ ೧೯೨೪ ರಿಂದ ಬಲ್ಮಠದಲ್ಲಿ ತನ್ನದೇ ಕಟ್ಟಡವನ್ನು ಸ್ಥಾಪಿಸಿಕೊಂಡು ಕಾರ್ಯನಿರ್ವಹಿಸಲಾರಂಬಿಸಿತು. (೫)

ಮುಖ್ಯವಾಗಿ ಆರ್ಯ ಸಮಾಜ ನಮ್ಮ ದೇಶದ ಈ ಭಾಗದಲ್ಲಿ ಸ್ತ್ರೀ ಶಿಕ್ಷಣಕ್ಕಾಗಿಯೇ ಶ್ರಮಿಸಿದೆ. ಬಡ ಹಾಗೂ ಅನಾಥ ಹೆಣ್ಣುಮಕ್ಕಳಿಗೆ ವಿದ್ಯಭ್ಯಾಸದ ಸೌಲಭ್ಯವನ್ನೊದಗಿಸಿ ಸ್ವಾವಲಂಬಿಗಳಾಗಿ ಬದುಕುವಂತೆ ಮಾಡಲು ಕನ್ಯಾಗುರುಕುಲವನ್ನು ೧೯೩೩ ರಲ್ಲಿ ಪ್ರಾರಂಭಿಸಿತು. ಇಲ್ಲಿ ಯಾವುದೇ ಜಾತಿಯ ಅನಾಥ ಮತ್ತು ದುರ್ಬಲ ವರ್ಗದ ಹೆಣ್ಣುಮಕ್ಕಳಿಗೆ ಪ್ರವೇಶ ನೀಡಲಾಗುತ್ತಿತ್ತು. ಅಲ್ಲದೇ ಕದ್ರಿಯಲ್ಲಿ ಸ್ಥಾಪಿಸಲ್ಪಟ್ಟ ಸಾಮಾನ್ಯ ಪ್ರಾಥಮಿಕ ಶಾಲೆಯಲ್ಲಿಯೂ ಬಾಲಕಿಯರ ಸೇರ್ಪಡೆಯನ್ನು ಉತ್ತೇಜಿಸುತ್ತಿತ್ತು. (೬)

**ಸ್ತ್ರೀ ವಿಮೋಚನೆಗಾಗಿ ಆರ್ಯ ಸಮಾಜದ ಕಾಯಕ್ರಮಗಳು**

ಬಾಲ್ಯ ವಿವಾಹದ ಖಂಡನೆ, ವಿಧವಾ ವಿವಾಹ ಮತ್ತು ಸ್ತ್ರೀ ಶಿಕ್ಷಣ, ಅಂತರ್ಜಾತಿ ವಿವಾಹ ಮುಂತಾದ ಕಾರ್ಯಕ್ರಮಗಳಲ್ಲಿ ಅರಿವು ಮೂಡಿಸಲು ಸಮಾಜದ ಸದಸ್ಯರು ಮನೆ ಮನೆಗೆ ತೆರಳಿ ಕಾರ್ಯ ನಿರ್ವಹಿಸುತ್ತಿದ್ದರು. ಲಕ್ಷ್ಮಣದೇವ ಪಂಡಿತ ಮತ್ತು ಮೋನಪ್ಪ ತಿಂಗಳಾಯ ಹೆಚ್ಚು ಉತ್ಸುಹಕರಾಗಿ ಹಿಂದುಳಿದ ವರ್ಗ ಮತ್ತು ಸ್ತ್ರೀಯರ ಅಭಿವೃದ್ಧಿಗಾಗಿ ಶ್ರಮಿಸಿದರು. (೭) ಆರ್ಯಸಮಾಜದ ಚಟುವಟಿಕೆಗಳು ಮಂಗಳೂರಿನಲ್ಲಿ ಹೆಚ್ಚು ಜನರನ್ನು ಆಕರ್ಷಿಸಿವೆ. ವೈಧಿಕ ಜ್ಞಾನ ಪ್ರಸಾರ ಮತ್ತು ಭಾರತೀಯ ಸಂಸ್ಕೃತಿಯ ಪುನರುಜ್ಜೀವನ ಕಾರ್ಯಗಳಿಗೆ ಆರ್ಯ ಸಮಾಜ ಪ್ರಾಮುಖ್ಯತೆಯನ್ನು ನೀಡಿದೆ. ಮಂಗಳೂರಿನಲ್ಲಿ ಆರ್ಯ ಸಮಾಜ ಈಗಲೂ ಕಾರ್ಯನಿರ್ವಹಿಸುತ್ತಿದೆ.

**ಇ) <u>ಥಿಯೋಸೋಫಿಕಲ್ ಸೊಸೈಟಿ:</u>**

ಇಡಿಯ ಭಾರತದಲ್ಲಿ ಸ್ತ್ರೀ ವಿಮೋಚನೆಗಾಗಿ ಶ್ರಮಿಸಿದ ಇನ್ನೊಂದು ವಿದೇಶಿ ಮೂಲದ ಸಂಸ್ಥೆ ಥಿಯೋಸೋಫಿಕಲ್ ಸೊಸೈಟಿ. ಭಾರತದಲ್ಲಿ ಥಿಯೋಸೋಪೀಕಲ್ ಸೊಸೈಟಿಯ ಮುಂದಾಳಾಗಿದ್ದ ಶ್ರೀಮತಿ ಅನಿಬೆಸೆಂಟ್ ರವರು ವೈದಿಕ ಕಾಲದಲ್ಲಿ ಮಹಿಳೆಯರೆಗೆ ಶಿಕ್ಷಣದ ಅವಕಾಶವಿತ್ತೆಂದೂ, ಆ ಮಹಿಳೆಯರು ಸಮಾಜದಲ್ಲಿ ಮುಕ್ತವಾಗಿ ಓಡಾಡಿಕೊಂಡಿದ್ದಾರೆಂದು ಸಮರ್ಥಿಸಿದರು. ಆ ಸ್ವರ್ಣಯುಗಕ್ಕೆ ಮರಳುವ ಅಗತ್ಯವನ್ನು ಜನರಲ್ಲಿ ಮನಗಾಣಿಸಲು ಪ್ರಯತ್ನಿಸಿದರು. ಅದಕ್ಕಾಗಿ ಮಹಿಳೆಯರಿಗೆ ಶಿಕ್ಷಣ ಅತೀ ಅಗತ್ಯ ಎಂದು ವಾದಿಸಿದರು. ೧೯೧೧ ರಲ್ಲಿ "ಇಂಡಿಯನ್ ಲೇಡಿಸ್ ಮ್ಯಾಗಝಿನ್" ಎಂಬ ಪತ್ರಿಕೆಗೆ ಮಹಿಳೆಯರಿಗೆ ಶಿಕ್ಷಣ ಎಂಬ ಲೇಖನವೊಂದರಲ್ಲಿ ಈ ರೀತಿ ಬರೆದರು. "ಮಹಿಳೆಯ ಶಿಕ್ಷಣವನ್ನು ನಿರ್ಲಕ್ಷಿಸಿದರೇ ಭಾರತದ ಹಣೆಬರಹವೇ ದುರ್ಗತಿಗಿಳಿಯುತ್ತದೆ". (೮)

ಸ್ತ್ರೀ ಶಿಕ್ಷಣವನ್ನು ಉತ್ತೇಜಿಸಲು, ಸ್ತ್ರೀ ವಿಮೋಚನೆಗಾಗಿ ಮಂಗಳೂರಿನಲ್ಲಿ ೧೯೦೧ ರಲ್ಲಿ ಥಿಯೋಸೋಫಿಕಲ್ ಸೊಸೈಟಿ ತನ್ನ ಶಾಖೆಯನ್ನು ತೆರೆಯಿತು. ೧೯೧೮ ರಲ್ಲಿ ಶ್ರೀಮತಿ ಅನಿಬೆಸೆಂಟ್ ಅವರ ಮುಂದಾಳತ್ವದಲ್ಲಿ ತೆರೆಯಿತು. ೧೯೧೮ ರಲ್ಲಿ ಮಂಗಳೂರಿನಲ್ಲಿ ತಮ್ಮ ಪ್ರಥಮ ಶಿಕ್ಷಣ ಸಂಸ್ಥೆಯಾದ ನ್ಯಾಷನಲ್ ಗರ್ಲ್ಸ್ ಸ್ಕೂಲನ್ನು ಕಮಲಾದೇವಿ ಚಟೋಪಾಧ್ಯಾಯ ಅವರ ಹಿರಿಯರ ಮನೆಯಲ್ಲಿ ತೆರೆಯಿತು. ಮುಂದೆ ಇದಕ್ಕೆ ಬೆಸೆಂಟ್ ಪ್ರಾಥಮಿಕ ಶಾಲೆ ಎಂದು ನಾಮಕರಣ ಮಾಡಲಾಯಿತು. ೧೯೨೭ ರಲ್ಲಿ ಇದರ ಸಂಪೂರ್ಣ ಜವಬ್ದಾರಿಯನ್ನು ಥಿಯೋಸೋಫಿಕಲ್ ಸೊಸೈಟಿ ವಹಿಸಿಕೊಂಡಿದ್ದು, ಇದಕ್ಕೆ ಮದರಾಸ್ ಸರಕಾರದಿಂದ ಧನಸಹಾಯ ಮತ್ತು ಮಾನ್ಯತೆ ದೊರೆಯಿತು. ೧೯೩೪ ರಲ್ಲಿ ಹುಡುಗಿಯರ ವಸತಿಯ ನಿಲಯವನ್ನು ಸ್ಥಾಪಿಸಿತು. ಇದು ಜಿಲ್ಲೆಯ ಹೊರವಲಯುಗಳಿಂದ ವಿದ್ಯಾರ್ಥಿನಿಯವರು ವಿದ್ಯಾಭ್ಯಾಸ ಪಡೆದುಕೊಳ್ಳಲು ಅನುಕೂಲಕರ ವ್ಯವಸ್ಥೆಯನ್ನು ಮಾಡಿಕೊಟ್ಟಿತು. ೧೯೪೨ ರಲ್ಲಿ ಈ ಶಾಲೆಯನ್ನು ಮಾಧ್ಯಮಿಕ ಶಾಲೆಯಾಗಿ ಮೇಲ್ದರ್ಜೆಗೇರಿಸಲಾಯಿತು. ೧೯೪೩ ರಲ್ಲಿ ಈ ಶಾಲೆಯನ್ನು ರಾಷ್ಟ್ರೀಯ ಶಿಕ್ಷಣ ಸಮಿತಿಯ ವಶಕ್ಕೆ ಕೊಡಲಾಯಿತು. (೯)

ಮಹಿಳೆಯರ ಶಿಕ್ಷಣಕ್ಕೆ ಕ್ಯಾಥೋಲಿಕ್ ಸಂಸ್ಥೆಗಳ ನಂತರ ಥಿಯೋಸೋಫಿಕಲ್ ಸೊಸೈಟಿಯು ಮಂಗಳೂರಿನಲ್ಲಿ ಹೆಚ್ಚಿನ ಕೊಡುಗೆಗಳನ್ನು ನೀಡಿದೆ.

## ಈ) ಸ್ತ್ರೀ ವಿಮೋಚನೆಗಾಗಿ ಹೋರಾಡಿದ ದಕ್ಷಿಣ ಕನ್ನಡದ ಮಹಿಳೆ ಪಂಡಿತಾ ರಮಾಬಾಯಿ

**ಜೀವನ**

ಹತ್ತೊಂಭತ್ತನೇ ಶತಮಾನದಲ್ಲಿ ವೈದಿಕ ಶಿಕ್ಷಣವನ್ನು ತಂದೆಯಿಂದ ಪಡೆದುಕೊಂಡ ಪ್ರತಿಭಾವಂತ ಮಹಿಳೆ ಜಿಲ್ಲೆಯ ಕಾರ್ಕಳ ತಾಲೂಕಿನ ಪದ್ಮನಾಥ ಡೊಂಗ್ರೆ ಯವರ ಪುತ್ರಿ ರಮಾಬಾಯಿ. ಬ್ರಾಹ್ಮಣ ಸಮುದಾಯದವರಿಂದ ತೀವ್ರ ವಿರೋಧವಿದ್ದರೂ ಎಂಟರಿಂದ ಹದಿನಾಲ್ಕನೆಯ ವಯಸ್ಸಿನವರೆಗೆ ಡೊಂಗ್ರೆ ಯವರು ತಮ್ಮ ಪುತ್ರಿಗೆ ವೈದಿಕ ಶಿಕ್ಷಣವನ್ನು ನೀಡಿದರು. ತನ್ನ ಹದಿನಾರನೆಯ ವಯಸ್ಸಿಗೆ ರಮಾಬಾಯಿ ತನ್ನ ತಂದೆ ತಾಯಿಯರನ್ನು ಕಳೆದುಕೊಂಡರು. ಬಾಲ್ಯವಿವಾಹ ನಡೆಯುತ್ತಿದ್ದ ಆ ಕಾಲದಲ್ಲಿ ಆಕೆ ಅವಿವಾಹಿತರಾಗಿಯೇ ಇದ್ದರು. ಅವಿವಾಹಿತರಾಗಿ ಉಳಿಯುವ ನಿರ್ಧಾರಕ್ಕೆ ಆಕೆಯ ತಂದೆ ತಾಯಿಯರು ಒಪ್ಪಿಗೆ ಸೂಚಿಸಿದ್ದರು.

ತಂದೆ ತಾಯಿಯವರನ್ನು ಕಳೆದುಕೊಂಡ ರಮಾಬಾಯಿ ಮತ್ತು ಆಕೆ ಸಹೋದರ ಭಾರತದ ಉದ್ದಗಲಕ್ಕೂ ಸಂಚಾರ ಮಾಡಿ ಸಮಾಜ ಸುಧಾರಣೆ ಮತ್ತು ಸ್ತ್ರೀ ವಿಮೋಚನೆಯ ಬಗ್ಗೆ ಉಪನ್ಯಾಸಗಳನ್ನು ನೀಡಿದರು. ಕಲ್ಕತ್ತಾದ ಗಣ್ಯರು ರಮಾಬಾಯಿಯವರನ್ನು ವಿದ್ಯಾಧಿದೇವತೆ ಸರಸ್ವತಿ ಎಂದು ಪ್ರಶಂಸೆ ಮಾಡಿದರು. ಅಕೆಗೆ ಪಂಡಿತಾ ಎಂಬ ಬಿರುದನ್ನೂ ನೀಡಿದರು. (೧೦)

ಸ್ವಲ್ಪ ಸಮಯದಲ್ಲಿ ರಮಾಬಾಯಿ ತನ್ನ ಸಹೋದರರನ್ನು ಕಳೆದುಕೊಂಡರು. ಇದರಿಂದ ಆಕೆಯು ಕುಟುಂಬದ ಆಸರೆಯನ್ನು ಕಳೆದುಕೊಂಡಂತಾಯಿತು. ಸಹೋದರರ ಆಪ್ತ ಮಿತ್ರ ಬಿಪಿನ್ ಬಿಹಾರಿ ದಾಸ್ ಮೇಧಾನಿಯನ್ನು ರಮಬಾಯಿ ವಿವಾಹವಾದರು. ಆತ ಜಾತಿಯಲ್ಲಿ ಶೂದ್ರನಾಗಿದ್ದ ಆದರೆ ಈ ವಿವಾಹ ಹೆಚ್ಚು ಸಮಯ ಬಾಳಲಿಲ್ಲ. ಆಕೆ ಒಂದು ಹೆಣ್ಣು ಮಗುವಿನ ತಾಯಿಯಾದ ನಂತರ ಗಂಡನನ್ನು ಕಳೆದುಕೊಂಡರು. ಪತಿಯನ್ನು ಕಳೆದುಕೊಂಡ ನಂತರ ರಮಾಬಾಯಿ ತನ್ನ ಚಟುವಟಿಕೆಗಳನ್ನು ಪೂನಾದಿಂದ ಪ್ರಾರಂಬಿಸಿದರು. ಸ್ವಲ್ಪ ಕಾಲ ಪೂನಾದಲ್ಲಿ ಸ್ತ್ರೀ ವಿಮೋಚನೆಗೆ ಮತ್ತು ಸ್ತ್ರೀ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸಲು ಕಾರ್ಯ ನಿರ್ವಹಿಸಿದರು. ರಮಾಬಾಯಿ ಮುಂದೆ ತಮ್ಮ ಪುಟ್ಟ ಮಗಳು ಮತ್ತು ಸ್ನೇಹಿತೆ ಆನಂದಿಬಾಯ್ ಭಗತ್ ಎಂಬ ಗೆಳತಿಯ ಜೊತೆ ಇಂಗ್ಲೆಂಡ್ ಗೆ ಪ್ರಯಾಣ ಬೆಳೆಸಿದರು. ಅವರು ಇಂಗ್ಲೆಂಡ್ ನ ವಾಂಟೇಜ್ ನಲ್ಲಿ ವಾಸ್ತವ್ಯ ಹೂಡಿದರು. ಅದರೆ ಕೆಲವು ಸಮಯದಲ್ಲಿ ಆನಂದಿಬಾಯ್ ಆತ್ಮಹತ್ಯೆ ಮಾಡಿಕೊಂಡು ಬಿಟ್ಟಳು. (ಈ ಬಗ್ಗೆ ಕಾರಣಗಳು ದೊರೆತಿಲ್ಲ). ಇಂಗ್ಲೆಂಡ್ ನಲ್ಲಿ ವಾಸ್ತವ್ಯ ಹೂಡಿದ ಸಂದರ್ಭದಲ್ಲಿ ತಾನು ಕ್ರಿಶ್ಚಿಯನ್ ಜಾತಿಗೆ ಸೇರುವುದಿಲ್ಲ ಎಂದೇ ರಮಾಬಾಯಿ ತಿಳಿಸಿದ್ದರು.

'ವಾಂಟೇಜ್ ಸಿಸ್ಟರ್ಸ್' ಇವರ ಶಿಕ್ಷಣಕ್ಕೆ ಸಂಪೂರ್ಣ ವ್ಯವಸ್ಥೆಯನ್ನು ಮಾಡಿದರು. ಒಂದು ವರ್ಷ ಪ್ರಾಥಮಿಕ ಇಂಗ್ಲೀಷ್ ಅಬ್ಯಾಸ ಮಾಡಿದ ರಮಾಬಾಯಿ ನಂತರ ಚೆಲ್ತಿನ್‌ಹಮ್ ಮಹಿಳಾ ಕಾಲೇಜನ್ನು ಸೇರಿದರು. ಅಲ್ಲಿ ಗಣಿತ ಇಂಗ್ಲೀಷ್ ಸಾಹಿತ ಮತ್ತು ವಿಜ್ಞಾನವನ್ನು ಅಧ್ಯಯನ ಮಾಡಿದರು. (೧೧)

ಇಪ್ಪತ್ತೈದನೆ ವಯಸ್ಸಿಗೆ ತಮ್ಮ ಸಂಬಧಿಕರನ್ನೆಲ್ಲ ಕಳೆದುಕೊಂಡ ರಮಾಬಾಯಿ ಕಾಣದ ದೇಶದಲ್ಲಿ ದಿಕ್ಕುಕಾಣದೆ ಬ್ಯಾಪ್ಟಿಸಂ ಗೆ ಸೇರಿದರು. ನಂತರ ತಮ್ಮ ಜೀವನದ ಉದ್ದೇಶಗಳ ಈಡೇರಿಕೆಗಾಗಿ ದೇಶ ವಿದೇಶಗಳಲ್ಲಿ ಸಂಚರಿಸಿ, ಸ್ತ್ರೀವಿಮೋಚನ ಕಾರ್ಯಗಳನ್ನು ಕೈಗೊಂಡರು. ೫ ಎಪ್ರಿಲ್ ೧೯೨೨ ರಲ್ಲಿ ಅವರು ತಮ್ಮ ಕೊನೆಯುಸಿರೆಳೆದರು. (೧೨)

**<u>ರಮಾಬಾಯಿಯವರು ಸ್ತ್ರೀ ವಿಮೋಚನಾ ಕಾರ್ಯಗಳು:</u>**

ರಮಾಬಾಯಿಯವರು ಮೂಲತಃ ದಕ್ಷಿಣ ಕನ್ನಡದವರಾಗಿದ್ದರೂ ಅವರ ಚಟುವಟಿಕೆಗಳು ಮುಂಬೈ ಮತ್ತು ಪೂನಾಗಳಲ್ಲೇ ಕೇಂದ್ರೀಕೃತವಾಗಿತ್ತು. ವಿಧವೆಯರಿಗಾಗಿ ಮುಂಬೈ ನಲ್ಲಿ ೧೮೮೯ ರಲ್ಲಿ ಶಾರದಾ ಸದನವನ್ನು ಸ್ಥಾಪಿಸಿದರು. (೧೩) ಈ ಶಾಲೆ ಉತ್ತಮ ಜಾತಿಯ ಕೆಲವು ಹಿಂದೂ ವಿಧವೆಯರನ್ನು ಆಕರ್ಷಿಸಿತು. ರಮಾ ಬ್ಯಾಯವರ ಶಾಲೆಯ ಬಗ್ಗೆ ಕಟುವಾದ ಟೀಕೆಗಳು ಮುಂಬೈನ ಪತ್ರಿಕೆಗಳನ್ನು ಪ್ರಕಟವಾಗುತ್ತಿತ್ತು. ಕೇಸರಿ ಪತ್ರಿಕೆಯು **"ವಿಧವೆಯರನ್ನು ಜಾತಿಕೆಡಿಸಿ ಕ್ರಿಶ್ಚಿಯನ್ನರನ್ನಾಗಿಸಲು"** ಮಾಡುವ ಹುನ್ನಾರ ಎಂದು ರಮಾಬಾಯಿಯವರ ಶಾಲೆಯನ್ನು ಟೀಕಿಸಿತು. ಆರ್ಥಿಕ ಒತ್ತಡಗಳಿಂದಾಗಿ ರಮಾ ಬ್ಯಾ ತನ್ನ ಶಾಲೆಯನ್ನು ಪೂನಾಕ್ಕೆ ಸ್ಥಳಾಂತರಿಸಬೇಕಾಯಿತು. ಟೀಕೆಗಳನ್ನೆದುರಿಸಲು ರಮಾಬಾಯಿ ಕಾರ್ಯ ನಿರ್ವಾಹಕ ಸಮಿತಿಯೊಂದನ್ನು ರಚಿಸಿ ಅಲ್ಲಿ ತುಂಬಾ ನಿಷ್ಠ ಹಿಂದೂಗಳೆಂದು ಹೆಸರಾದ ಸುಧಾರಕರನ್ನೇ ಸದಸ್ಯರನ್ನಾಗಿ ನೇಮಕ ಮಾಡಿದರು. ಆದರೂ ೧೮೯೩ರ ವೇಳೆಗೆ ಇಪ್ಪತ್ತೈದು ಹುಡುಗಿಯರು ಶಾಲೆಯನ್ನು ಬಿಟ್ಟರು. ಅಲ್ಲದೆ ಆಶ್ರಯದ ಅಗತ್ಯವಿರುವ ವಿಧವೆಯರೂ ಇರಲಿಲ್ಲ. ಆದರೆ ಶೀಘ್ರದಲ್ಲಿ ರಮಾಬ್ಯಾ ಯವರ ಶಾಲೆಗೆ ಬೇರೆ ವಿದ್ಯಾರ್ಥಿನಿಯರು ಸೇರ್ಪಡೆಗೊಂಡರು. ೧೯೦೦ ವೇಳೆಗೆ ಶಾರದಾ ಸದನವು ಸುಮಾರು ಎಂಭತ್ತು ಮಹಿಳೆಯರಿಗೆ ಶೈಕ್ಷಣಿಕ ತರಬೇತಿ ನೀಡಿ ಅವರನ್ನು ಸ್ವಾವಲಂಬಿಗಳಾಗಿ ಮಾಡಿತು. ೧೮೯೫ ರಲ್ಲಿ ಕೆಡಾಂಗಾವ್ ನಲ್ಲಿ (ಪೂನಾದಿಂದ ೩೦ ಮೈಲು ದೂರ) ೧೦೦ ಎಕರೆ ಭೂಮಿಯನ್ನು ಖರೀದಿ ಮಾಡಿದ್ದರು. ಅಲ್ಲಿಯೇ ತಮ್ಮ ಎರಡನೇಯ ಶಾಲೆ "ಮುಕ್ತಿ" ಯನ್ನು ತೆರೆದರು. (೧೪) ತಮ್ಮ ಶಾಲೆಯಲ್ಲಿ ಅನಾಥರನ್ನೂ, ದುರ್ದೈವಿಗಳನ್ನೂ ಸೇರಿಸಿಕೊಳ್ಳುತ್ತಿದ್ದರು. ೧೯೦೦ ರ ವೇಳೆಗೆ ಈ

ಸಂಸ್ಥೆ ಸುಮಾರು ಎರಡು ಸಾವಿರ ಜನರಿಗೆ ಆಶ್ರಯ ನೀಡಿತ್ತು. ರಮಾಬ್ಯಾ ಅವರ ಮುಕ್ತಿ ಸಂಸ್ಥೆಗೆ ಅರ್ಥಿಕ ನೆರವು ಅಮೇರಿಕನ್ ಸಂಸ್ಥೆಯಿಂದ ದೊರೆಯುತಿತ್ತು.

ರಮಾ ಬ್ಯಾ ಯವರ ಸಂಸ್ಥೆಗಳಲ್ಲಿ ದೇಹರಚನಾ ಶಾಸ್ತ್ರ ಸಸ್ಯಶಾಸ್ತ್ರ, ನೈತಿಕ ಶಿಕ್ಷಣ, ಪಾರ್ಲಿಮೆಂಟಿನ ಸರಳ ನಿಯಮಗಳನ್ನು ಕಲಿಸಲಾಗುತ್ತಿತ್ತು, ಅಲ್ಲದೆ ಮುದ್ರಣ, ಮರಗೆಲಸ, ತೋಟಗಾರಿಕೆ, ಕೃಷಿ, ಹೊಲಿಗೆ ಮುಂತಾದ ಔದ್ಯೋಗಿಕ ತರಬೇತಿಯನ್ನು ನೀಡಲಾಗುತ್ತಿತ್ತು.

ಶಿಕ್ಷಣದ ಬಗ್ಗೆ ರಮಾಬ್ಯಾ ಅವರ ಕೊಡುಗೆಗಳನ್ನು ಆಕೆಯ ಸಮಕಾಲಿನರು ಗೌರವದಿಂದ ಗುರುತಿಸಿದರು. ಆದರೆ ಆಕೆ ಕ್ರಿಶ್ಚಿಯನ್ ಆಗಿ ಮತಾಂತರ ಹೊಂದಿದ್ದು ಮತ್ತು ಕ್ರಿಶ್ಚಿಯನ್ ಧರ್ಮವನ್ನು ಪ್ರಚಾರಗೊಳಿಸಿದ್ದು, ಬಹುಪಾಲು ಹಿಂದುಗಳಿಗೆ ಸಹನೆಯಾಗುವ ವಿಚರವಾಗಿರಲಿಲ್ಲ, ರಮಾಬ್ಯಾ ಯವರಂತಹ ಪ್ರತಿಭಾವಂತ ಮಹಿಳೆ ಕ್ರಿಶ್ಚಿಯನ್ ಆಗಿ ಮತಾಂತರ ಗೊಂಡು, ಆ ನೆಲೆಯಲ್ಲಿಯೇ ಕಾರ್ಯ ನಿರ್ವಹಿಸಿದ್ದು , ಹಿಂದೂ ಧರ್ಮ ಮತ್ತು ಸಮಾಜಕ್ಕಾದ ನಷ್ಟ ಎಂದೇ ಪರಿಗಣಿಸಲಾಗುತ್ತದೆ. ಅಥವಾ ಶುದ್ಧ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಸ್ತ್ರೀಯರ ಬೌದ್ಧಿಕ ಸಾಮರ್ಥ್ಯವನ್ನು ಪರಿಗಣಿಸದಿರುವ ಹಿಂದೂ ಸಮಾಜದ ದೋಷದಿಂದಾಗಿ ಉಂಟಾದ ನಷ್ಟವೆಂದೂ ಪರಿಗಣಿಸಬಹುದು. ಸ್ವಂತ ವ್ಯಕ್ತಿತ್ವ ಹೊಂದಿದ ಮತ್ತು ಪ್ರತಿಭಾವಂತ ಸ್ತ್ರೀಯರನ್ನು ಹಿಂದೂ ಸಮಾಜ ಒಪ್ಪಿಕೊಂಡಿರಲಿಲ್ಲ. ಅಧೀನತೆಗೆ ಒಳಪಡದ ಸ್ತ್ರೀಯರನ್ನು ಒಪ್ಪಿಕೊಳ್ಳದ ಬ್ರಾಹ್ಮಣ ಸಮುದಾಯ ರಮಾಬಾಯಿಯವರ ವ್ಯಯಕ್ತಿಕ ಬದುಕಿನ ಸಂಕಷ್ಟಗಳಿಗೆ ಕಾರಣವಾಯಿತು. ರಮಾಬಾಯಿ ಯವರು ದೇಶ ವಿದೇಶಗಳಲ್ಲಿ ಸಂಚರಿಸಿ ಸ್ತ್ರೀ ವಿಮೋಚನೆಯ ಬಗ್ಗೆ ಜನ ಜಾಗೃತರಾಗುವಂತೆ ಮಾಡಿದರು, ೧೯೮೯ ರಲ್ಲಿ ಅವರ ನೆನಪಿಗಾಗಿ ಭಾರತ ಸರಕಾರ ಅಂಚೆ ಚೀಟಿಯೊಂದನ್ನು ಬಿಡುಗಡೆಮಾಡಿತ್ತು. (೧೫)

**ರಮಾ ಬ್ಯಾ ಅವರ ಕೆಲವು ಕೃತಿಗಳು (೧೬)**

೧. ಸ್ತ್ರೀ ಧರ್ಮ ನೀತಿ – ಮರಾಠಿ

೨. ಸಂಸ್ಕೃಟ್ ವರ್ಡ್ ಟು ಬರ್ಲಿನ್ ಕಾಂಗ್ರೇಸ್ ಆಪ್ ಒರಿಯಂಟಲಿಸ್

೩. ದ ಹೈ ಕಾಸ್ಟ್ ಹಿಂದೂ ವಿಮೆನ್

೪. ದ ಕಂಡಿಷನ್ ಆಫ್ ವಿಮೆನ್ ಇನ್ ಯು. ಎಸ್ ಎ.

೫. ಬೈಬಲ್ ನ ಮರಾಠೀ ಭಾಷಾಂತರ (೧೬)

**ಉ) ಸ್ತ್ರೀ ವಿಮೋಚನೆ ಕುದ್ಮಲ್ ರಂಗರಾವ್ ಅವರ ಕೊಡುಗೆಗಳು:**

ಕುದ್ಮಲ್ ರಂಗರಾವ್ ಮುಖ್ಯವಾಗಿ ಪಂಚಮರ ಉದ್ಧಾರಕ್ಕಾಗಿ ಶ್ರಮಿಸಿದವರು. ೧೯೦೪ ರಲ್ಲಿ ಬ್ರಹ್ಮ ಸಮಾಜದ ಕಾರ್ಯದರ್ಶಿಯಾಗಿದ್ದ ಇವರು ಸ್ತ್ರೀ ಶಿಕ್ಷಣಕ್ಕೂ ಪ್ರೇರಣೆಯನ್ನು ನೀಡಿದ್ದಾರೆ. ಇವರನ್ನು ಮಂಗಳೂರಿನ ಪ್ರಥಮ ಸಮಾಜಸುಧಾರಕರೆಂದು ಪರಿಗಣಿಸಲಾಗಿದೆ. ಅಂತರ್ಜಾತೀಯ ವಿವಾಹಗಳನು ಪ್ರೇರಿಪಿಸುತ್ತಿದ್ದ ಇವರು ತಾವೇ ಅದಕ್ಕೆ ಮಾದರಿಯಾಗಿದ್ದರು. ಸಾರಸ್ವತ ಬ್ರಾಹ್ಮಣರಾಗಿದ್ದ ಇವರು ತಮ್ಮ ವಿದ್ಯಾವಂತ ಮಗಳನ್ನು ಬ್ರಾಹ್ಮಣೇತರನೊಬ್ಬನಿಗೆ ವಿವಾಹ ಮಾಡಿಕೊಟ್ಟಿದ್ದರು. ಹಿಂದೂ ಸ್ತ್ರೀಯರನ್ನು ಉನ್ನತ ಶಿಕ್ಷಣಕ್ಕೆ ಕಳುಹಿಸುವಲ್ಲಿಯೂ ಇವರೇ ಮೊದಲಿಗರಾಗಿದ್ದಾರೆ. ಸಹ ಶಿಕ್ಷಣವನ್ನು ನೀಡುತ್ತಿದ್ದ ಮಂಗಳೂರಿನ ಸರಕಾರಿ ಕಾಲೇಜಿಗೆ ತಮ್ಮ ಪುತ್ರಿಯರನ್ನು ಉನ್ನ ತ ಶಿಕ್ಷಣಕ್ಕಾಗಿ ಕಳುಹಿಸಿದ್ದರು. (೧೭)

ಕುದ್ಮಲ್ ರಂಗರಾವ್ ಅವರು ೧೮೭೨ ರ ವಿಶೇಷ ವಿವಾಹಕಾಯ್ದೆಯ ರಿಜಿಸ್ಟ್ರಾರ್ ಆಗಿದ್ದಾಗ ಹಳೆ ಮದ್ರಾಸ್ ಪ್ರಾಂತ್ಯದಲ್ಲಿ ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುತ್ತಿದ್ದವರ ವಿವಾಹಗಳನ್ನು ಕಾನೂನು ಬದ್ಧ ಗೊಳಿಸಿದರು. (ಅಲ್ಲಿಯವರೆಗೂ ಅದು ಕಾನೂನು ಬದ್ಧವಾಗಿರಲಿಲ್ಲ). ಅಲ್ಲದೆ ಬಹು ಪತ್ನಿತ್ವವನ್ನು ನಿಲ್ಲಿಸುವ ಪ್ರಯತ್ನಗಳನ್ನು ಮಾಡಿದ್ದರು (೧೮).

ಕುದ್ಮಲ್ ರಂಗರಾವ್ ಅವರನ್ನು ದಕ್ಷಿಣ ಕನ್ನಡ ಜಿಲ್ಲೆಯ ದಲಿತ್ತೋದ್ಧಾರ ಚಳುವಳಿ ಮತ್ತು ಸ್ತ್ರೀ ವಿಮೋಚನ ಚಳುವಳಿಗಳಿಂದಾಗಿ ಇಂದಿಗೂ ಜನರು ಸ್ಮರಿಸುತ್ತಾರೆ. ರಂಗರಾವ್ ಸ್ಮಾರಕ ಹಿಂದುಳಿದ ವರ್ಗಗಳ ವಿಧ್ಯಾರ್ಥಿನಿ ನಿಲಯ ಇಂದು ಮಂಗಳೂರಿನ ಪಿ.ವಿ.ಎಸ್. ವೃತ್ತದಲ್ಲಿ ಕಾರ್ಯನಿರ್ವಹಿಸುತ್ತಿದೆ.

**ಅಡಿ ಟಿಪ್ಪಣಿಗಳು**

೧) – ಪುಟ ಸಂಖ್ಯೆ ೨,

೨) – ಪುಟ ಸಂಖ್ಯೆ ೩,

೩) – ಬ್ರಹ್ಮಸಮಾಜ ಪ್ರಕಟಣೆ – ಒರಿಜಿನ್ ಆಫ್ ಬ್ರಹ್ಮ ಸಮಾಜ ಅಟ್ ಮಂಗಳೂರು,
– ಪು. ಸಂ. ೯

೪) – ಪು. ಸ. ೧೮.೧೯

೫.) ಲೋಕಾನಂದ – ಸಂದರ್ಶನದಿಂದ ಮೌಖಿಕ ಮಾಹಿತಿ ಸಂಗ್ರಹ ಕಾರ್ಯದರ್ಶಿ – ಆರ್ಯಸಮಾಜ, ಮಂಗಳೂರು.

೬) –ಅದೇ – ತಾ: ೨೫.೮.೨೦೦೮

೭) ಭವಾನಿ ಶಂಕರ್ – ಮೌಖಿಕ ಮಾಹಿತಿಗಳು – ಆರ್ಯ ಸಮಾಜದ ಸದಸ್ಯರು ತಾ: ೨೫.೮.೨೦೦೮

೮) ಜೆರಾಲ್ಡಿನ್ ಫೋರ್ಬ್ – ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ. ೬೩

೯) ಬೆಸೆಂಟ್ ವಿದ್ಯಾಸಂಸ್ಥೆಯ ವರದಿ – ಪು.ಸ. ೭೧

೧೦) ಜೆ. ಫೋರ್ಬ್ – ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ. ೬೬

೧೧) ತುಳುವಾಯಿಟ್ – ತುಳುವಾ ಮಿನಿಯೇಚರ್ ಇನ್ ಇಂಡಿಯಾ – ಪು.ಸ.೧೬೨

೧೨) – ಅದೇ – – – ಅದೇ –

೧೩) ಜೆ. ಫೋರ್ಬ್ – ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ. ೬೮

೧೪) – ಅದೇ – – – ಅದೇ –

೧೫) ಪಂಡಿತ್ ರಮಾಬಾಯಿ ಮುಕ್ತಿ ಮಿಶನ್ – ಪೂನಾ – ಮುಕ್ತಿ ಕಿರಣ ಸ್ಪೆಷಲ್ ಅಡಿಶನ್, ಪು.ಸ.೧೫

೧೬) – ಅದೇ – – – ಅದೇ –

೧೭) ಬ್ರಹ್ಮ ಸಮಾಜ ಪ್ರಕಟನೆ – ದಿ ಒರಿಜನ್ ಆಫ್ ಬ್ರಹ್ಮ ಸಮಾಜ ಅಟ್ ಮಂಗಳೂರು, ಪು. ಸ.೧೫

೧೮) – ಅದೇ – – – ಅದೇ –

# ಅಧ್ಯಾಯ – ೫

# ಸ್ತ್ರೀಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ

ಅ) ಅಶಿಕ್ಷಿತ ಸ್ತ್ರೀಯರ ಉದ್ಯೋಗಗಳು

ಆ) ಶಿಕ್ಷಿತ ಸ್ತ್ರೀಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ

ಇ) ಮಂಗಳೂರಿನ ಮಹಿಳಾ ಸಭಾ

# ಅಧ್ಯಾಯ – ೩

## ಅ) ಅಶಿಕ್ಷಿತ ಸ್ತ್ರೀಯರ ಉದ್ಯೋಗಗಳು

ಮಹಿಳೆಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ ಅಲ್ಲದೆ ಮಹಿಳೆಯರಿಗೆ ವೃತ್ತಿ ಸಂಬಂಧಿ ಅವಕಾಶಗಳು ಉದ್ಯಮ ಕ್ಷೇತ್ರಗಳಲ್ಲಿ ದೊರೆಯಲರಂಭಿಸಿದ್ದು ವಸಾಹತುಶಾಹಿ ಆಧಿಪತ್ಯದಲ್ಲಿಯೇ ಎನ್ನುವ ಅಂಶವನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಸಾಂಪ್ರದಾಯಿಕ ಅರ್ಥ ವ್ಯವಸ್ಥೆಯಲ್ಲಿ ಜಿಲ್ಲೆಯಲ್ಲಿ ಕೆಳವರ್ಗದ ಮಹಿಳೆಯರು ದುಡಿಮೆಯನ್ನು ಕಂಡಿದ್ದರು. ಕಾಳುಕಡ್ಡಿಗಳನ್ನು ಹಸನು ಮಾಡುವುದು, ಮನೆಯ ಹೊರಗಿನ ಕೆಲಸಗಳಲ್ಲಿ ದುಡಿಯುವುದು, ತೋಟಗದ್ದೆಗಳಲ್ಲಿ ನಾಟಿ, ಭತ್ತ ಕುಟ್ಟುವ ಮುಂತಾದ ಕೆಲಸಗಳಲ್ಲಿ ಅವರು ತೊಡಗಿಸಿಕೊಂಡಿದ್ದರು. ಆದರೆ ಬದಲಾದ ಅರ್ಥಿಕ ವ್ಯವಸ್ಥೆಯಲ್ಲಿ ಇಂತಹ ಕೆಲವು ಕೆಲಸಗಳು ಮರೆಯಾದವು. ಅಕ್ಕಿ ಮಿಲ್ಲುಗಳ ಸ್ಥಾಪನೆಯಿಂದಾಗಿ ಅಕ್ಕಿಕುಟ್ಟುವ ಕೆಲಸ ನಿಂತು ಹೋಯಿತು. ಗಿರಣಿಗಳಲ್ಲಿ ಮೆಷಿನ್ ಗಳ ಬಳಕೆಯಾದದ್ದೇ ಅಕ್ಕಿ ಕುಟ್ಟುವ ಕೆಲಸ ನಿಂತು ಹೋಯಿತು.

ವಸಾಹತು ಅಡಳಿತದ ಪರಿಣಾಮವಾಗಿ ರೂಪುಗೊಂಡ ಹೊಸ ಆರ್ಥಿಕ ಕ್ಷೇತ್ರವು ಮಹಿಳೆಯರಿಗೆ ಹೊಸ ಉದ್ಯೋಗಾವಕಾಶಗಳನ್ನು ಒದಗಿಸಿದವು. ಕಾರ್ಖಾನೆಗಳು ಮತ್ತು ಪ್ಲಾಂಟೇಷನ್‌ಗಳು ಅಶಿಕ್ಷಿತ ಮಹಿಳೆಯರಿಗೆ ಉದ್ಯೋಗಗಳನ್ನು ದೊರಕಿಸಿಕೊಟ್ಟವು ಅವರನ್ನು ಆರ್ಥಿಕವಾಗಿ ಸಶಕ್ತರನ್ನಾಗಿ ಮಾಡಲು ಬಾಸೆಲ್ ಮಿಶನ್ ಮತ್ತು ಕ್ಯಾಥೋಲಿಕ್ ಮಿಶನರಿಗಳು ಕೆಲವು ಪ್ರಯತ್ನಗಳನ್ನು ಮಾಡಿವೆ. ಬಾಸೆಲ್ ಮಿಶನ್ ಮಹಿಳೆಯರಿಗೆ ನಿಟ್ಟಿಂಗ್ ಸ್ಟಿಚ್, ನೇಯ್ಗೆ, ಕುಶಲ ಕಲೆ, ಕಸೂತಿ ಮುಂತಾದ ಕ್ಷೇತ್ರಗಳಲ್ಲಿ ತರಬೇತಿಯನ್ನು ನೀಡುತ್ತಿತ್ತು. (೧) ತಮ್ಮ ಶಾಲೆಗಳಲ್ಲಿ ಶಾಲಾ ಅವಧಿಯ ನಂತರ ಅವರು ತರಬೇತಿಯನ್ನು ನೀಡುತ್ತಿದ್ದರು. ಆ ಮೂಲಕವಾಗಿ ಮಹಿಳೆಯರಿಗೆ ತಮ್ಮ ಜೀವನವನ್ನು ತಾವೇ ರೂಪಿಸಿಕೊಳ್ಳಲು ಸಹಾಯ ಮಾಡಿತು. ಇದು ಮುಖ್ಯವಾಗಿ ಹೊಸದಾಗಿ ಕ್ರೈಸ್ತ ಮತಕ್ಕೆ ಸೇರಿದ ಹಿಂದೂ ಮಹಿಳೆಯರಿಗೆ ಜೀವನ ನಿರ್ವಹಣೆಗಾಗಿ ಆದಾಯಗಳಿಸಲು ಕೈಗೊಂಡ ಕ್ರಮಗಳಾಗಿತು. ಅಲ್ಲದೆ ಹಂಚಿನ ಕಾರ್ಖಾನೆಗಳಲ್ಲಿ ನೇಯ್ಗೆ ಕಾರ್ಖಾನೆಗಳಲ್ಲಿ ಮತ್ತು ಸಣ್ಣ ಪುಟ್ಟ ಗುಡಿ ಕೈಗಾರಿಕೆಗಳಲ್ಲಿ ಅಶಿಕ್ಷಿತ ಮಹಿಳೆಯರು ಉದ್ಯೋಗಗಳನ್ನು ಕಂಡುಕೊಂಡರು.

## ಅಡಿ ಟಿಪ್ಪಣಿಗಳು

| | | | |
|---|---|---|---|
| ೧) | } | – | ಪುಟ ಸಂಖ್ಯೆ ೨, |
| ೨) | | – | ಪುಟ ಸಂಖ್ಯೆ ೩, |
| ೩) | | – | ಬ್ರಹ್ಮಸಮಾಜ ಪ್ರಕಟಣೆ – ಒರಿಜಿನ್ ಆಫ್ ಬ್ರಹ್ಮ ಸಮಾಜ ಅಟ್ ಮಂಗಳೂರು, |
| | | – | ಪು. ಸಂ. ೯ |
| ೪) | | – | ಪು. ಸ. ೧೮.೧೯ |
| ೫.) | ಲೋಕಾನಂದ | – | ಸಂದರ್ಶನದಿಂದ ಮೌಖಿಕ ಮಾಹಿತಿ ಸಂಗ್ರಹ ಕಾರ್ಯದರ್ಶಿ – ಆರ್ಯಸಮಾಜ, ಮಂಗಳೂರು. |
| ೬) | –ಅದೇ | – | ತಾ: ೨೫.೮.೨೦೦೮ |
| ೭) | ಭವಾನಿ ಶಂಕರ್ | – | ಮೌಖಿಕ ಮಾಹಿತಿಗಳು – ಆರ್ಯ ಸಮಾಜದ ಸದಸ್ಯರು ತಾ: ೨೫.೮.೨೦೦೮ |
| ೮) | ಜೆರಾಲ್ಡಿನ್ ಫೋರ್ಬ್ಸ್ | – | ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ. ೬೩ |
| ೯) | ಬೆಸೆಂಟ್ ವಿದ್ಯಾಸಂಸ್ಥೆಯ ವರದಿ | – | ಪು.ಸ. ೭೧ |
| ೧೦) | ಜೆ. ಫೋರ್ಬ್ಸ್ | – | ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ. ೬೬ |
| ೧೧) | ತುಳುವಾಯಿಟ್ | – | ತುಳುವಾ ಮಿನಿಯೇಚರ್ ಇನ್ ಇಂಡಿಯಾ – ಪು.ಸ.೧೬೨ |
| ೧೨) | – ಅದೇ – | – | – ಅದೇ – |
| ೧೩) | ಜೆ. ಫೋರ್ಬ್ಸ್ | – | ಆಧುನಿಕ ಭಾರತದಲ್ಲಿ ಮಹಿಳೆ – ಪು.ಸ. ೬೮ |
| ೧೪) | – ಅದೇ – | – | – ಅದೇ – |
| ೧೫) | ಪಂಡಿತ್ ರಮಾಬಾಯಿ ಮುಕ್ತಿ ಮಿಶನ್ | – | ಪೂನಾ – ಮುಕ್ತಿ ಕಿರಶ ಸ್ಪೆಷಲ್ ಅಡಿಶನ್, ಪು.ಸ.೧೫ |
| ೧೬) | – ಅದೇ – | – | – ಅದೇ – |
| ೧೭) | ಬ್ರಹ್ಮ ಸಮಾಜ ಪ್ರಕಟನೆ | – | ದಿ ಒರಿಜನ್ ಆಫ್ ಬ್ರಹ್ಮ ಸಮಾಜ ಅಟ್ ಮಂಗಳೂರು, ಪು. ಸ.೧೫ |
| ೧೮) | – ಅದೇ – | – | – ಅದೇ – |

# ಅಧ್ಯಾಯ – ೫

# ಸ್ತ್ರೀಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ

ಅ) ಅಶಿಕ್ಷಿತ ಸ್ತ್ರೀಯರ ಉದ್ಯೋಗಗಳು

ಆ) ಶಿಕ್ಷಿತ ಸ್ತ್ರೀಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ

ಇ) ಮಂಗಳೂರಿನ ಮಹಿಳಾ ಸಭಾ

# ಅಧ್ಯಾಯ – ೫

## ಅ) ಆಶಿಕ್ಷಿತ ಸ್ತ್ರೀಯರ ಉದ್ಯೋಗಗಳು

ಮಹಿಳೆಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ ಅಲ್ಲದೆ ಮಹಿಳೆಯರಿಗೆ ವೃತ್ತಿ ಸಂಬಂಧಿ ಅವಕಾಶಗಳು ಉದ್ಯಮ ಕ್ಷೇತ್ರಗಳಲ್ಲಿ ದೊರೆಯಲರಂಭಿಸಿದ್ದು ವಸಾಹತುಶಾಹಿ ಆಧಿಪತ್ಯದಲ್ಲಿಯೇ ಎನ್ನುವ ಅಂಶವನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಸಾಂಪ್ರದಾಯಿಕ ಅರ್ಥ ವ್ಯವಸ್ಥೆಯಲ್ಲಿ ಜಿಲ್ಲೆಯಲ್ಲಿ ಕೆಳವರ್ಗದ ಮಹಿಳೆಯರು ದುಡಿಮೆಯನ್ನು ಕಂಡಿದ್ದರು. ಕಾಳುಕಡ್ಡಿಗಳನ್ನು ಹಸನು ಮಾಡುವುದು, ಮನೆಯ ಹೊರಗಿನ ಕೆಲಸಗಳಲ್ಲಿ ದುಡಿಯುವುದು, ತೋಟಗದ್ದೆಗಳಲ್ಲಿ ನಾಟಿ, ಭತ್ತ ಕುಟ್ಟುವ ಮುಂತಾದ ಕೆಲಸಗಳಲ್ಲಿ ಅವರು ತೊಡಗಿಸಿಕೊಂಡಿದ್ದರು. ಆದರೆ ಬದಲಾದ ಅರ್ಥಿಕ ವ್ಯವಸ್ಥೆಯಲ್ಲಿ ಇಂತಹ ಕೆಲವು ಕೆಲಸಗಳು ಮರೆಯಾದವು. ಅಕ್ಕಿ ಮಿಲ್ಲುಗಳ ಸ್ಥಾಪನೆಯಿಂದಾಗಿ ಅಕ್ಕಿಕುಟ್ಟುವ ಕೆಲಸ ನಿಂತು ಹೋಯಿತು. ಗಿರಣಿಗಳಲ್ಲಿ ಮೆಷಿನ್ ಗಳ ಬಳಕೆಯಾದದ್ದೇ ಅಕ್ಕಿ ಕುಟ್ಟುವ ಕೆಲಸ ನಿಂತು ಹೋಯಿತು.

ವಸಾಹತು ಅಡಳಿತದ ಪರಿಣಾಮವಾಗಿ ರೂಪುಗೊಂಡ ಹೊಸ ಆರ್ಥಿಕ ಕ್ಷೇತ್ರವು ಮಹಿಳೆಯರಿಗೆ ಹೊಸ ಉದ್ಯೋಗಾವಕಾಶಗಳನ್ನು ಒದಗಿಸಿದವು. ಕಾರ್ಖಾನೆಗಳು ಮತ್ತು ಪ್ಲಾಂಟೇಷನ್‌ಗಳು ಅಶಿಕ್ಷಿತ ಮಹಿಳೆಯರಿಗೆ ಉದ್ಯೋಗಗಳನ್ನು ದೊರಕಿಸಿಕೊಟ್ಟವು ಅವರನ್ನು ಆರ್ಥಿಕವಾಗಿ ಸಶಕ್ತರನ್ನಾಗಿ ಮಾಡಲು ಬಾಸೆಲ್ ಮಿಶನ್ ಮತ್ತು ಕ್ಯಾಥೋಲಿಕ್ ಮಿಶನರಿಗಳು ಕೆಲವು ಪ್ರಯತ್ನಗಳನ್ನು ಮಾಡಿವೆ. ಬಾಸೆಲ್ ಮಿಶನ್ ಮಹಿಳೆಯರಿಗೆ ನಿಟ್ಟಿಂಗ್ ಸ್ಟಿಚ್, ನೇಯ್ಗೆ, ಕುಶಲ ಕಲೆ, ಕಸೂತಿ ಮುಂತಾದ ಕ್ಷೇತ್ರಗಳಲ್ಲಿ ತರಬೇತಿಯನ್ನು ನೀಡುತ್ತಿತ್ತು. (೧) ತಮ್ಮ ಶಾಲೆಗಳಲ್ಲಿ ಶಾಲಾ ಅವಧಿಯ ನಂತರ ಅವರು ತರಬೇತಿಯನ್ನು ನೀಡುತ್ತಿದ್ದರು. ಆ ಮೂಲಕವಾಗಿ ಮಹಿಳೆಯರಿಗೆ ತಮ್ಮ ಜೀವನವನ್ನು ತಾವೇ ರೂಪಿಸಿಕೊಳ್ಳಲು ಸಹಾಯ ಮಾಡಿತು. ಇದು ಮುಖ್ಯವಾಗಿ ಹೊಸದಾಗಿ ಕ್ರೈಸ್ತ ಮತಕ್ಕೆ ಸೇರಿದ ಹಿಂದೂ ಮಹಿಳೆಯರಿಗೆ ಜೀವನ ನಿರ್ವಹಣೆಗಾಗಿ ಆದಾಯಗಳಿಸಲು ಕೈಗೊಂಡ ಕ್ರಮಗಳಾಗಿತು. ಅಲ್ಲದೆ ಹಂಚಿನ ಕಾರ್ಖಾನೆಗಳಲ್ಲಿ ನೇಯ್ಗೆ ಕಾರ್ಖಾನೆಗಳಲ್ಲಿ ಮತ್ತು ಸಣ್ಣ ಪುಟ್ಟ ಗುಡಿ ಕೈಗಾರಿಕೆಗಳಲ್ಲಿ ಅಶಿಕ್ಷಿತ ಮಹಿಳೆಯರು ಉದ್ಯೋಗಗಳನ್ನು ಕಂಡುಕೊಂಡರು.

**ಅ) ಶಿಕ್ಷಿತ ಸ್ತ್ರೀಯರು ಉದ್ಯೋಗರಂಗದಲ್ಲಿ ಮತ್ತು ಸಾರ್ವಜನಿಕ ಚಟುವಟಿಕೆಗಳಲ್ಲಿ**

ಹತ್ತೊಂಭತ್ತನೇಯ ಶತಮಾನದಲ್ಲಿ ಶಿಕ್ಷಿತ ಸ್ತ್ರೀಯರಿಗೆ ಹೊಸ ಉದ್ಯೋಗಾವಕಾಶಗಳು ತೆರೆಯಲಾರಂಭಿಸಿದವು. ಆಸ್ಪತ್ರೆಗಳಲ್ಲಿ ದಾದಿಯರಾಗಿ, ಬೈಬಲ್ ಮಹಿಳೆಯರಾಗಿ, ವೈದ್ಯೆಯರಾಗಿ, ಅಧ್ಯಾಪಕಿಯರಾಗಿ, ಮಹಿಳೆಯರು ಕಾರ್ಯನಿರ್ವಹಿಸಲು ಪ್ರಾರಂಭಿಸಿದರು. ಡಾ. ಇವಾ ಲಿಂಬಾರ್ಡ್ ಅವರಿಂದ ಸ್ಥಾಪಿಸಲ್ಪಟ್ಟ ಉಡುಪಿಯ ಮಿಶನ್ ಆಸ್ಪತ್ರೆಯಲ್ಲಿ ೧೯೩೪ ರಲ್ಲಿ ನರ್ಸಿಂಗ್ ತರಬೇತಿ ಸಂಸ್ಥೆಯನ್ನು ತೆರೆಯಲಾಯಿತು. ಅಲ್ಲಿ ತರಬೇತಿ ಪಡೆದುಕೊಂಡ ದಾದಿಯರು ಆಸ್ಪತ್ರೆಗಳಲ್ಲಿ ಉದ್ಯೋಗಾವಕಾಶಗಳನ್ನು ಕಂಡುಕೊಂಡರು. ಹಿಂದೂ ಧರ್ಮ ದಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಮಹಿಳೆಯರು ಬೈಬಲ್ ಮಹಿಳೆಯರಾಗಿ ಉದ್ಯೋಗ ಕಂಡುಕೊಂಡರು (೨) – ಇನ್ನು ಉನ್ನತ ವರ್ಗದ ಶಿಕ್ಷಿತ ಮಹಿಳೆಯರು ಸಮಾಜ ಸೇವೆಗಳಲ್ಲೂ, ರಾಜಕೀಯ ಚಟುವವಟಿಕೆಗಳಲ್ಲೂ ಭಾಗವಹಿಸಲು ಪ್ರಾರಂಭಿಸಿದರು. ಆದರೆ ಇಲ್ಲಿ ಅವರು ಪ್ರವೇಶ ಪಡೆಯುತ್ತಿದ್ದುದು ತಮ್ಮ ಪ್ರಭಾವಶಾಲೀ ಅಥವಾ ಗಂಡ, ತಂದೆಯ ಬೆಂಬಲದಿಂದ ಉದಾ- ಕಮಲಾದೇವಿ ಚಟ್ಟೋಪಾಧ್ಯಾಯ, ಸುಗಣ ಕಾರ್ನಾಡ್ ದೇಸಾಯಿ, ಲಕ್ಷ್ಮಿ ರೈ ಮತ್ತು ಇತರರು.

ಇದರಲ್ಲಿ ಆದಾಯ ಗಳಿಸುವ ಅಗತ್ಯವೇನೂ ಅವರಿಗೆ ಇರಲಿಲ್ಲ. ಜೀವನೋಪಾಯಕ್ಕಾಗಿ ಉದ್ಯೋಗಗಳನ್ನು ಕಂಡು ಕೊಂಡ ಉನ್ನತ ವರ್ಗ ಶಿಕ್ಷಿತ ಮಹಿಳೆಯರ ಬಗ್ಗೆ ಸ್ಪಷ್ಟ ದಾಖಲೆಗಳು ಲಭ್ಯವಿಲ್ಲ. ಮಧ್ಯಮ ವರ್ಗದ ಕೆಲ ಶಿಕ್ಷಿತ ಮಹಿಳೆಯರು ೨೦ ನೇ ಶತಮಾನದ ಆರಂಭದಲ್ಲಿ ತಮ್ಮನ್ನು ಸಮಾಜ ಸೇವೆಗಳಲ್ಲಿ ತೊಡಗಿಸಿಕೊಂಡರು. ಪಾಶ್ಚಾತ್ಯ ಶಿಕ್ಷಣ ಪಡೆದುಕೊಂಡ ಈ ಮಹಿಳೆಯರು ತಮ್ಮ ಆಸಕ್ತಿಯನ್ನು ಮನೆಯಿಂದಾಚೆಗೆ ವಿಸ್ತರಿಸಿಕೊಂಡರು. ಇವರಿಗೆ ಬೆಂಬಲವಾಗಿ ಪುರುಷ ಸುಧಾರಣಾವಾಧಿಗಳು ನಿಂತಿದ್ದರು. ಮಹಿಳಾ ವಿಷಯಗಳ ಬಗ್ಗೆ ಸಭೆ ಸೇರಿ ಚರ್ಚಿಸಲು ಪ್ರಾರಂಭಿಸಿದರು.

**ಇ) ಮಂಗಳೂರಿನ ಮಹಿಳಾ ಸಭಾ:**

ಇಪ್ಪತ್ತನೆಯ ಶತಮಾನದ ಮೊದಲ ಕಾಲುಭಾಗದಲ್ಲಿ ಮಹಿಳೆಯರು ತಮ್ಮದೇ ಸಂಘಟನೆಗಳನ್ನು ಮಾಡಿಕೊಳ್ಳಲು ಪ್ರಾರಂಭಿಸಿದರು. ಈ ದಿಕ್ಕಿನ ಮೊದಲ ಹೆಜ್ಜೆಯೆಂದರೆ ಮಂಗಳೂರಿನ ಮಹಿಳಾ ಸಭಾದ ರಚನೆ. ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಮುಂದಾಳುವಾಗಿದ್ದ

ಕಾರ್ನಾಡ್ ಸದಾಶಿವರಾಯರೇ ಈ ಕಾರ್ಯದಲ್ಲಿ ಆರಂಭಿಕ ಕ್ರಮಗಳನ್ನು ಕೈಗೊಂಡರು ರಾಷ್ಟ್ರೀಯ ಮಟ್ಟದಲ್ಲಿ ಮಹಿಳಾ ಸಭೆಗಳ ರಚನೆಯಾದುದೇ ಅವರಿಗೆ ಈ ಕಾರ್ಯ ಮಾಡಲು ಪ್ರೇರೇಪಣೆಯಾಯಿತು. ಮಂಗಳೂರಿನ ಮಹಿಳಾ ಸಭಾದ ರಚನೆ ಸದಾಶಿವರಾವ್ ಕಾರ್ನಾಡ್ ಅವರ ಮನೆಯಲ್ಲಿಯೇ ಆಯಿತು. ಇದರ ಮೊದಲ ಅಧ್ಯಕ್ಷೆಯಾಗಿ ಅವರ ಪತ್ನಿಯೇ ಕಾರ್ಯನಿರ್ವಹಿಸಿದ್ದರು. (೩)

ತಾ: ೧೨.೧೦.೧೯೧೭ ರಂದು ರಚನೆಗೊಂಡ ಮಹಿಳಾ ಸಭಾ ತಾ:೨೨.೨.೧೯೨೯ ರಂದು ಆಗಿನ ಮದ್ರಾಸ್ ಸರ್ಕಾರದಿಂದ ದಾಖಲಿಸಲ್ಪಟ್ಟಿತು. (೪) ಇದರೊಂದಿಗೆ ಮಹಿಳೆಯರಿಗೆ ತಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸಲು ಒಂದು ಬಲವಾದ ವೇದಿಕೆ ರಚನೆಯಾದಂತಾಯಿತು. ಮಹಿಳಾ ಸಭಾದ ಉದ್ದೇಶಗಳು ಈ ಕೆಳಗಿನಂತಿದ್ದವು

೧. ಉಪಯುಕ್ತ ಜ್ಞಾನ ನೀಡಿ ಮಹಿಳೆಯರ ಅಭಿವೃದ್ಧಿಯನ್ನು ಸಾಧಿಸುವುದು.

೨. ಇಂಗ್ಲೀಷ್ ಹಿಂದಿ ಸಂಗೀತ ಮತ್ತು ಕಸೂತಿ ಕಲೆಗೆ ಸಂಬಂಧ ಪಟ್ಟಂತೆ ತರಗತಿಗಳನ್ನು ನಡೆಸುವುದು.

೩. ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿ.

೪. ಗ್ರಹ ಕೈಗಾರಿಕೆಗಳನ್ನು ಸ್ಥಾಪಿಸುವುದು.

೫. ವಿಧವೆಯರಿಗೆ ಆಶ್ರಯ ತಾಣಗಳನ್ನು ಒದಗಿಸುವುದು.

೬. ಉದ್ಯೋಗಸ್ಥ ಸ್ತ್ರೀಯರಿಗೆ ವಸತಿ ಸೌಲಭ್ಯ

೭. ಸಮಾಜ ಸೇವಾ ಕಾರ್ಯಗಳನ್ನು ಕೈಗೊಳ್ಳಲು ತರಬೇತಿ ನೀಡುವುದು. (೫)

ಮೇಲಿನ ಉದ್ದೇಶಗಳಿಗಾಗಿ ರಚನೆ ಗೊಂಡ ಮಹಿಳಾ ಸಭಾದ ಕಾರ್ಯಕಾರಿ ಸಮಿತಿಯ ಸದಸ್ಯರೆಲ್ಲರೂ ಗೃಹಿಣಿಯರೇ ಆಗಿದ್ದರು. ತಮ್ಮ ಗುರಿಯನ್ನು ಸಾಧಿಸಲು ಅವರು ಹಲವು ಮಹತ್ವದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು ಅವುಗಳೆಂದರೆ ಅನಾಥ ಮಕ್ಕಳ ಪೋಷಣೆ, ಸ್ತ್ರೀ ಶಿಕ್ಷಣಕ್ಕೆ ಉತ್ತೇಜನ, ವಿಧವೆಯರ ವಿಮೋಚನೆ, ದುರ್ಬಲ ಸ್ತ್ರೀಯರ ಹೇಳಿಗೆ ಮುತಾದವುಗಳು. ಮಹಿಳೆಯರ ಸಂಘಟನಾ ಸಾಮರ್ಥ್ಯಕ್ಕೆ ಮತ್ತು ಸಮಾಜ ಸೇವಾ ಕಾರ್ಯಗಳಿಗೆ ಮಹಿಳಾ ಸಭಾ ಒಳ್ಳೆಯ ಅವಕಾಶವನ್ನು ಮಾಡಿಕೊಟ್ಟಿತು. ರಾಷ್ಟ್ರೀಯ ಹೋರಾಟದ ಸಂದರ್ಭವಾಗಿದ್ದ ಆ ಕಾಲದಲ್ಲಿ ಮಹಿಳಾ ಸಭಾ ರಾಷ್ಟ್ರೀಯ ಭಾವನೆಗಳಿಗೆ ಇಂಬು ಕೊಡುವ

ಕಾರ್ಯಗಳನ್ನೇ ಹಮ್ಮಿಕೊಂಡಿತ್ತು. ಇದಕ್ಕಾಗಿಯೇ ಹಿಂದಿ ಭಾಷಾತರಗತಿಗಳನ್ನು ನಡೆಸಲಾಗುತ್ತಿತ್ತು. ಔದ್ಯೋಗಿಕ ತರಬೇತಿ, ಮಹಿಳೆಯರ ಪ್ರತಿಭಾ ಪ್ರದರ್ಶನಕ್ಕೆ ಅವಕಾಶ, ಖಾದಿ ಪ್ರಚಾರ ಮುಂತಾದ ಕಾರ್ಯಕ್ರಮಗಳನ್ನು ಮಹಿಳಾ ಸಭಾ ನಡೆಸುತ್ತಿತ್ತು. (೬)

ಮಂಗಳೂರಿನ ಜ್ಯೋತಿ ವೃತ್ತದಲ್ಲಿ ಸ್ವಂತ ಕಟ್ಟಡ ಹೊಂದಿ ಮಹಿಳಾ ಸಭಾ ಇಂದಿಗೂ ಕಾರ್ಯ ಕಾರ್ಯನಿರ್ವಹಿಸುತ್ತಿದೆ. ಶ್ರೀಮತಿ ಶಾಲಿನಿ ಪಂಡಿತ್ ಅಧ್ಯಕ್ಷರಾಗಿ ಮತ್ತು ಶ್ರೀಮತಿ ಸುಮತಿ ಪಾಂಗಾಳ ಅವರು ಉಪಾಧ್ಯಕ್ಷರಾಗಿ ಈ ಸಂಘವನ್ನು ಯಶಸ್ವಿಯಾಗಿ ಮುನ್ನಡೆಸುತ್ತಿದ್ದರೆ. ಮಹಿಳೆಯರ ಪ್ರತಿಭೆಯ ವಿಕಸನಕ್ಕೆ ಮಹಿಳಾಸಭಾ ಎಲ್ಲಾ ಅವಕಾಶಗಳನ್ನು ಮಾಡಿಕೊಡುತ್ತಿದೆ. ಅಂಥರ ಕ್ಷೇಮಾಭ್ಯುದ್ಯಕ್ಕಾಗಿ ಮತ್ತು ದುರ್ಬಲ ಸ್ತ್ರೀಯರ ಏಳಿಗೆಗಾಗಿ ಮಹಿಳಾ ಸಭಾ ಶ್ರಮಿಸುತ್ತಿದೆ.

ಗ್ರಾಮೀಣ ಪ್ರದೇಶದಲ್ಲಿ ಮಹಿಳಾ ಸಭಾಗಳ ರಚನೆಯಾದುದರ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳು ಲಭ್ಯವಿಲ್ಲ.

**ಅಡಿ ಟಿಪ್ಪಣಿಗಳು**

೧) ರೆವೆ ಡಾ॥ ವಿಜಯಕುಮಾರ್ – ಕರ್ನಾಟಕದಲ್ಲಿ ಪ್ರೊಟೆಸ್ಟಾಂಟ ಮಿಶನರಿಗಳ ಸಂಸ್ಥೆ – ಪುಟ ಸಂಖ್ಯೆ ೧೧೭

೨) ಪದ್ಮಶ್ರೀ – ಎಜುಕೇಶನ್ ಫ್ರಂ ಬಾಸೆಲ್ ಮಿಶನ್

೩) ಸೂರ್ಯನಾಥ ಕಾಮತ್ – ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಪುಟ ಸಂಖ್ಯೆ ೧೧೭

೪) ಮೆಮೊರೆಡಂ ಆಫ್ ಅಸೋಸಿಯೇಷನ್ ಆಫ್ ಮಹಿಳಾ ಸಭಾ – ೧೦.೧೨.೧೯೨೮, ಪುಟ ಸಂಖ್ಯೆ ೧೦,೧೧.

೫) –ಅದೇ– – – ಅದೇ –

೬) ವೈಯಕ್ತಿಕ ಸಂದರ್ಶನ – ಶ್ರೀಮತಿ ಸುಮತಿ ಪಾಂಗಾಳ– ಉಪಾಧ್ಯಕ್ಷರು– ಮಹಿಳಾ ಸಭಾ ಮಂಗಳೂರು–ತಾ: ೧೬.೧೦.೨೦೦೮ – ಮೌಖಿಕ ಮಾಹಿತಿಗಳು.

# ಅಧ್ಯಾಯ – ೬

# ರಾಷ್ಟ್ರೀಯ ಹೋರಾಟ ಮತ್ತು ಮಹಿಳೆಯರು

ಅ) ಗಾಂಧೀ ಪೂರ್ವಯುಗ

ಆ) ಗಾಂಧೀಯುಗ– ಗಾಂಧೀತತ್ವಗಳ ಪ್ರಭಾವ

ಇ) ಜಿಲ್ಲೆಗೆ ಗಾಂಧೀಜಿಯವರ ಬೇಟಿಗಳು ಮಹಿಳೆಯರ ಸ್ಪಂದನ

ಈ) ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರು

೧) ಶ್ರೀಮತಿ ಸರೋಜಿನಿ ನಾಯ್ಡುರವರ ಭೇಟಿ

೨) ನಾಯಕತ್ವ ವಹಿಸಿದ ಮಹಿಳೆಯರು – ಲಕ್ಷ್ಮೀ ರೈ – ಸುಗುಣ ಕಾರ್ನಾಡ್ ದೇಸಾಯಿ – ಕಮಲಾದೇವಿ ಚಟ್ಟೋಪಾಧ್ಯಾಯ – ವಯಲೆಟ್ ಆಳ್ವ – ನಿರುಪಮಾ ನಾಯಕ್

ಉ) ಸಾಮಾನ್ಯ ಮಹಿಳೆಯರ ಪಾತ್ರ

ಊ) ಸ್ವಾತಂತ್ರ್ಯ ಹೋರಾಟಗಾರರೊಬ್ಬರ ಪತ್ನಿಯ ಅನಿಸಿಕೆಗಳು.

# ಅಧ್ಯಾಯ – ೬

## ರಾಷ್ಟ್ರೀಯ ಹೋರಾಟ ಮತ್ತು ಮಹಿಳೆಯರು

ರಾಷ್ಟ್ರೀಯ ಹೋರಾಟ ಉನ್ನತ ಪದವನ್ನು ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧ ಪಟ್ಟಂತೆ ಒಂದು ರಾಜಕೀಯ ಮತ್ತು ಸಾಮಾಜಿಕ ಹೋರಾಟ ಎಂದೇ ಪರಿಗಣಿಸಬೇಕಾಗುತ್ತದೆ. ಏಕೆಂದರೆ ಇಲ್ಲಿ ಹತ್ತೊಂಭತ್ತನೇ ಶತಮಾನದಲ್ಲಿ ಬರಿಯ ರಾಜಕೀಯ ಸ್ವಾತಂತ್ರಕಷ್ಟೇ ಹೋರಾಟ ನಡೆದದ್ದಲ್ಲ. ಸಮಾಜ ಸುಧಾರಣಾ ಆಂದೋಲನಗಳು ರಾಷ್ಟ್ರೀಯ ಹೋರಾಟಕ್ಕೆ ಪೂರಕವಾಗಿ ನಡೆದಿವೆ.

ರಾಷ್ಟ್ರೀಯ ಹೋರಾಟವನ್ನು ನಾವು ಅಧ್ಯಯನದ ಅನುಕೂಲಕ್ಕೋಸ್ಕರ ಗಾಂಧೀ ಪೂರ್ವ ಯುಗ ಮತ್ತು ಗಾಂಧೀ ಯುಗ ಎಂದು ವಿಭಜಿಸಿದ್ದೇವೆ.

**ಅ)ಗಾಂಧೀ ಪೂರ್ವ ಯುಗ:**

ಗಾಂಧೀ ಪೂರ್ವಯುಗದಲ್ಲಿ ಅಂದರೆ ಹತ್ತೊಂಭತ್ತನೆ ಶತಮಾನದ ಕೊನೆಯ ವರ್ಷಗಳಲ್ಲಿ ಬ್ರಹ್ಮ ಸಮಾಜದ ಸ್ಥಾಪನೆಯೊಂದಿಗೆ (೧೮೭೦) ಜಿಲ್ಲೆಯಲ್ಲಿ ರಾಷ್ಟ್ರೀಯ ಹೋರಾಟಕ್ಕೊಂದು ನೆಲೆ ಸಿಕ್ಕಿದಂತಾಯಿತು. ಗಾಂಧಿಯುಗದಲ್ಲಿ ಸ್ವಾತಂತ್ರ ಹೋರಾಟದ ಅಗ್ರನಾಯಕರಾಗಿದ್ದ ಕಾರ್ನಾಡ್ ಸದಾಶಿವರಾಯರು ಬ್ರಹ್ಮ ಸಮಾಜದ ಸಕ್ರಿಯ ಕಾರ್ಯಕರ್ತರಾಗಿ, ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದ್ದರು. ಬ್ರಹ್ಮ ಸಮಾಜದ ಮೂಲಕ ಸ್ತ್ರೀ ಶಿಕ್ಷಣ, ಹಿಂದುಳಿದ ವರ್ಗಗಳ ಅಭಿವೃದ್ಧಿ ವಿಧವಾ ವಿವಾಹ ಮುಂತಾದ ಸಮಾಜ ಸುಧಾರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಅಮ್ಮೆಂಬಳ ಸುಬ್ಬರಾವ್, ಅರಸಪ್ಪ, ಉಳ್ಳಾಲದ ರಘುನಾಥಯ್ಯ, ಮೋನಪ್ಪ ತಿಂಗಳಾಯ ಮುಂತಾದವರು ಬ್ರಹ್ಮ ಸಮಾಜದ ಚಟುವಟಿಕೆಗಳನ್ನು ಮುನ್ನಡೆಸುತ್ತಿದ್ದರು. ಕುದ್ಮಲ್ ರಂಗರಾವ್ ಅವರು ಸ್ತ್ರೀಯರ ಏಳಿಗೆ ಮತ್ತು ಹಿಂದುಳಿದ ವರ್ಗಗಳ ಏಳಿಗೆಗಾಗಿ ಶ್ರಮಿಸಿದ್ದರು. ಈ ಅವಧಿಯಲ್ಲಿ ಜಿಲ್ಲೆಯ ಸ್ತ್ರೀಯರು ಭಾಗವಹಿಸಿದ ಬಗ್ಗೆ ಅಧಿಕೃತ ದಾಖಲೆಗಳು ಲಭ್ಯವಿಲ್ಲ. ಥಿಯೋಸೋಫಿಕಲ್ ಸೊಸ್ಶೆಟಿಯನ್ನು ಭಾರತದಲ್ಲಿ ಪ್ರಚುರ ಪಡಿಸಿದ ಶ್ರೀಮತಿ ಅನಿಬೆಸೆಂಟ್ ಅವರು ಮಂಗಳೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸಲು ಪ್ರಯತ್ನಿಸಿದ್ದರು.

**ಆ) ಗಾಂಧಿಯುಗ – ಗಾಂಧಿ ತತ್ವಗಳ ಪ್ರಭಾವ**

ರಾಷ್ಟ್ರೀಯ ಹೋರಾಟದ ಇತಿ ಹಾಸದಲ್ಲಿ ಗಾಂಧಿಯುಗ ಪ್ರಾರಂಭವಾದದ್ದು ಇಪ್ಪತ್ತನೇ ಶತಮಾನದ ಎರಡನೇ ದಶಕದಲ್ಲಿ. ಗಾಂಧಿ ತತ್ವಗಳು, ಸ್ವಾತಂಂತ್ರ್ಯಕ್ಕಾಗಿ ಅವರು ಬಳಸಿದ ಅಸ್ತ್ರಗಳು ಮಹಿಳೆಯರ ಸಲುವಾಗಿಯೇ ಹೇಳಿ ಮಾಡಿಸಿದಂತಿದ್ದವು ಎಂದರೆ ತಪ್ಪಾಗಲಾರದು ಸಹನೆ ತಾಳ್ಮೆ ಮತ್ತು ಸಹಿಷ್ಣುತೆಗಳಿಗೆ ಮಹಿಳೆಯರು ಯಾವಾಗಲೂ ಹೆಸರಾದವರು. ಸತ್ಯಾಗ್ರಹ, ಅಸಹಕಾರ, ಆಂದೋಲನಗಳಿಗೆ ಈ ಗುಣಗಳೇ ಮುಖ್ಯವಾಗಿ ಬೇಕು. ಮಹಿಳೆಯರು ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗವಹಿಸಿದರೆ ವಿದೇಶಿಯರ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವಾಗಬಹುದೆಂದು ಅವರು ತಿಳಿದಿದ್ದರು. (೧)

ಪಾನ ನಿರೋಧ, ವಿದೇಶಿ ವಸ್ತುಗಗಳ ಬಹಿಷ್ಕಾರ, ಸಹಕಾರ ಚಟುವಟಿಕೆ ಈ ಮುಂತಾದ ಕಾರ್ಯಕ್ರಮಗಳು ಮಹಿಳೆಯರಿಗೆ ರೂಪಿಸಿದಂತಿತ್ತು. ಸ್ವಾಂತತ್ರ್ಯ ಆಂದೋಲನದಲ್ಲಿ ನೇರವಾಗಿ ಭಾಗವಹಿಸದೆ ಮನೆಯಲ್ಲಿಯೇ ಈ ಕಾರ್ಯಗಳನ್ನು ಮಾಡಬಹುದಿತ್ತು. ಗಾಂಧೀಜಿಯವರ ಹೋರಾಟದ ಕರೆಗೆ ಮಹಿಳೆಯರು ಶೀಘ್ರವಾಗಿ ಸ್ಪಂದಿಸಿದರು. ಗಾಂಧಿ ತತ್ವಗಳ ಪ್ರಭಾವ ಮಹಿಳೆಯರ ಮೇಲೆ ಎಷ್ಟಿತ್ತೆಂದರೆ ದೇಶವೆಂದರೆ ಗಾಂಧಿ, ಸ್ವಾತಂತ್ರ್ಯವೆಂದರೆ ಗಾಂಧಿ, ವೈರಿಗಳೆಂದರೆ ಬ್ರಿಟೀಷರು ಎಂದೇ ಮಹಿಳೆಯರು ಪರಿಗಣಿಸಿದ್ದರ. ದೇಶ ಪ್ರೇಮ, ದೇಶ ಭಕ್ತಿಗಳಿಗಿಂತಲೂ ಹೆಚ್ಚಾಗಿ ಗಾಂಧೀಜಿ ಯವರ ಮೇಲಿನ ಗೌರವ ಮಹಿಳೆಯರು ರಾಷ್ಟ್ರೀಯ ಹೋರಾಟದಲ್ಲಿ ತೊಡಗುವಂತೆ ಮಾಡಿದವು. (೨).

ಸ್ವಾತಂತ್ರ್ಯ ಹೋರಾಟದ ಬಗ್ಗೆ ಜಾಗೃತಿ ಮೂಡಿಸಲು ಗಾಂಧೀಜಿಯವರು ಮೂರು ಬಾರಿ ಮಂಗಳೂರಿಗೆ ಭೇಟಿ ನೀಡಿದ್ದರು (೧೯೨೦, ೧೯೨೭ ಮತ್ತು ೧೯೩೪). ಗಾಂಧೀಜಿಯವರ ಭೇಟಿಯೇ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಸ್ಫೂರ್ತಿ ನೀಡಿತು ಅದನ್ನು ನೋಡಿದ ಮಹಿಳೆಯರೆಲ್ಲರಿಗೂ ಅವರ ಮೇಲಿನ ಗೌರವಾದರಗಳು ಹೆಚ್ಚಾದವು. ಸಾಮಾನ್ಯ ಮಹಿಳೆಯರು ತಮ್ಮಲ್ಲಿದ್ದ ಧನ ಹಾಗೂ ಕನಕಗಳನ್ನು ಗಾಂಧೀಜಿಯವರಿಗೆ ಅರ್ಪಿಸಿದರು. (೩)

**ಇ) ಜಿಲ್ಲೆಗೆ ಗಾಂಧೀಜಿಯವರ ಭೇಟಿಗಳು ಮಹಿಳೆಯರ ಸ್ಪಂದನ:**

ಮಹಾತ್ಮಾ ಗಾಂಧೀಜಿಯವರು ಒಟ್ಟು ಮೂರು ಬಾರಿ ದಕ್ಷಿಣ ಕನ್ನಡ ಜಿಲ್ಲೆಗೆ ಭೇಟಿ ನೀಡಿದ್ದರು. ಅವರ ಮೊದಲ ಭೇಟಿ ೧೯೨೦ ರ ಆಗಸ್ಟ್ ೧೯ ರಂದು ಶೌಕತ್ ಆಲಿಯವರೊಂದಿಗೆ ಮಂಗಳೂರಿಗೆ ಆಗಮಿಸಿದ್ದ ಅವರು ಇಂದಿನ ನೆಹರೂ ಮೈದಾನದಲ್ಲಿ ಅಪಾರ ಜನಸ್ತೋಮವನ್ನುದ್ದೇಶಿಸಿ ಭಾಷಣ ಮಾಡಿದ್ದರು. (೪) ದೇಶಕ್ಕಾಗಿ ತನು ಮನ ಧನವನ್ನು

ಅರ್ಪಿಸುವಂತೆ ಜನಸ್ತೋಮವನ್ನುದ್ದೇಶಿಸಿ ಭಾಷಣ ಮಾಡಿದ್ದರು. ಈ ಸಂದರ್ಭದಲ್ಲಿಯೇ ಜಿಲ್ಲೆಯ ಮಹಿಳೆಯರು ತಮ್ಮ ಆಭರಣಗಳನ್ನು ಗಾಂಧೀಜಿಯವರಿಗೆ ಸ್ವಯಂ ಇಚ್ಛೆಯಿಂದಲೇ ನೀಡಿದ್ದರು. ದೇಶವನ್ನು ಮುನ್ನಡೆಸುವ ನಾಯಕನೊಬ್ಬನ ಪ್ರೇರಣೆಯೇ ಮಹಿಳೆಯರ ಆಭರಣ ವ್ಯಾಮೋಹವನ್ನು ಬಿಟ್ಟಿರಬಹುದು. ಇಂತಹ ಮಹಿಳೆಯರು ನಮ್ಮ ಜಿಲ್ಲೆಯಲ್ಲಿ ಹಲವರಿದ್ದರು. ಅವರೆಲ್ಲರ ಬಗ್ಗೆ ದಾಖಲೆಗಳು ಲಭ್ಯವಾಗಿಲ್ಲ. ಈ ಭೇಟಿಯ ನಂತರ ಜಿಲ್ಲೆಯ ಮಂಗಳೂರು ಮತ್ತು ಉಡುಪಿ ಸ್ವಾತಂತ್ರ ಹೋರಾಟದ ಕೇಂದ್ರಗಳಾದವು.

೧೯೨೭ ರ ಅಕ್ಟೋಬರ್ ೨೬ ರಂದು ಗಾಂಧೀಜಿಯವರು ಎರಡನೇ ಬಾರಿ ಮಂಗಳೂರಿಗೆ ಭೇಟಿ ನೀಡಿದ್ದರು. ಈ ಸಂದರ್ಭದಲ್ಲಿ ೧೯೩೪, ಫೆಬ್ರವರಿ ೨೪ ಅವರು ಪುತ್ತೂರು, ಮಂಗಳೂರು ಮತ್ತು ೨೫ ರಂದು ಕುಂದಾಪುರಕ್ಕೆ ಭೇಟಿ ನೀಡಿದ್ದರು. ಅವರ ಮೂರನೆಯ ಭೇಟಿಯ ಪುತ್ತೂರಿನ ಸಾರ್ವಜನಿಕ ಸಭೆಯಲ್ಲಿ ಲಕ್ಷ್ಮೀ ರೈ ಅವರು ಪ್ರಮುಖ ಪಾತ್ರವಹಿಸಿದ್ದರು. ಅವರು ತಮ್ಮ ಮಗ ಕುಶಲ ನಾಥನ ಕೈಯಲ್ಲಿದ್ದ ಚಿನ್ನದ ಬಳೆ ಮತ್ತು ಕುತ್ತಿಗೆಯಲ್ಲಿದ್ದ ಹಾರವನ್ನು ಗಾಂಧೀಜಿಯವರಿಗೆ ಸಮರ್ಪಿಸಿದರು. (೫)

ಗಾಂಧೀಜಿಯವರು ಫೆಬ್ರವರಿ ೨೫ ರಂದು ಉಡುಪಿಗೆ ಬಂದಿದ್ದಾಗ ಇನ್ನೊಬ್ಬ ಚಿಕ್ಕ ಬಾಲಿಕೆ ಅವರ ಮೇಲೆ ವಿಶೇಷ ಪ್ರಭಾವ ಬೀರಿದರು. ಅವರೇ ಡಾ|| ನಿರುಪಮಾ ನಾಯಕ್. ಆಗ ಅವರು ಚಿಕ್ಕ ಬಾಲಿಕೆಯಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರರಾದ ಪಾಂಗಾಳ ಮಂಜುನಾಥ ನಾಯಕ್ ಅವರು ಪುತ್ರಿಯಾದ ಇವರು ಆಗಲೇ ಹಿಂದಿಯನ್ನು ಕಲಿತಿದ್ದರು. ಗಾಂಧೀಜಿಯರಿಗೆ ಸಲ್ಲಿಸಲಿರುವ ಮಾನಪತ್ರವನ್ನು ಹಿಂದಿಯಲ್ಲಿ ಓದಿ ಹೇಳಲು ಈ ಬಾಲಿಕೆಯನ್ನು ಆರಿಸಲಾಯಿತು. ಈ ಕಾರ್ಯವನ್ನು ಮಾಡುತಿದ್ದಾಗ ಗಾಂಧೀಜಿಯವರು ನಿರುಪಮಾಳಲ್ಲಿದ್ದ ಚಿನ್ನದ ಆಭರಣಗಳನ್ನು ದೇಶಕ್ಕಾಗಿ ಕೇಳಿದಾಗ ಆಕೆ ಅದನ್ನು ಸಮರ್ಪಿಸಿದಳು (೬) (ನಿರುಪಮಾ ಅವರ ಬಗ್ಗೆ ಬೇರೆಯೇ ಟಿಪ್ಪಣಿಯನ್ನು ನೀಡಲಾಗಿದೆ).

ಗಾಂಧೀಜಿಯವರ ಭೇಟಿ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ವಿಶೇಷ ಚಾಲನೆಯನ್ನು ನೀಡಿತು. ಅದರಲ್ಲೂ ಮಹಿಳೆಯರು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ಹೋರಾಡಲು ಈ ಭೇಟಿಗಳೇ ಕಾರಣವೆನ್ನಬಹುದು. ಗಾಂಧೀಜಿಯವರ ಹೋರಾಟ ಮಹಿಳೆಯರಿಗೆ ಹೇಳಿ ಮಾಡಿಸಿದಂತಿದ್ದವು ಸಹನೆ, ತಾಳ್ಮೆ, ಸಹೃದಯತೆ, ಮಹಿಳೆಯರ ಸಹಜ ಗುಣಗಳು. ಗಾಂಧೀಜಿಯವರ ಹೋರಾಟದ ಕ್ರಮ ಮಹಿಳೆಯರನ್ನು ಹೆಚ್ಚು ಆಕರ್ಷಿಸಿತು.

**ಈ) ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರು**

ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟವನ್ನು ಮುನ್ನಡೆಸಿದವರು ಕಾರ್ನಾಡ್ ಸದಾಶಿವರಾಯರೆಂದು ಎಲ್ಲರಿಗೂ ತಿಳಿದಿರುವ ವಿಚಾರ. ಇವರು ಗಾಂಧೀಜಿಯವರಿಗಿಂತಲೂ ಮೊದಲೇ ಸ್ವದೇಶಿ ಆಂದೋಲನದ ಬಗ್ಗೆ ಶ್ರದ್ಧೆ ವಸಿದ್ದರು ಎಂಬುದನ್ನು ಅವರ ಪುತ್ರಿ ಸುಗುಣ ಕಾರ್ನಾಡ್ ದೇಸಾಯಿಯವರು ತಾವು ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಎನ್ನುವ ಗ್ರಂಥದಲ್ಲಿ ತಾವು ಬರೆದ ಲೇಖನದಲ್ಲಿ ತಿಳಿಸುತ್ತಾರೆ. ಗಾಂಧೀಜಿಯವರ ಕರೆಯಂತೆ ಇಪ್ಪತ್ತನೇ ಶತಮಾನದ ಮೂರನೆಯ ದಶಕದಲ್ಲಿ ಸ್ವಾತಂತ್ರ್ಯ ಹೋರಾಟದ ತೀವ್ರತೆ ಜಿಲ್ಲೆಯಲ್ಲಿ ಕಾಣಿಸಿಕೊಂಡಿತು. ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಮುಂದಾಳುಗಳಾಗಿ ಪುರುಷರೇ ಭಾಗವಹಿಸಿದ್ದರು. ನಾಯಕತ್ವ ವಹಿಸಿದ ಮಹಿಳೆಯರು ತಾವು ಅವಲಂಬಿಸಿದ ಪುರುಷರ ಪ್ರಭಾವದಿಂದಷ್ಟೇ ಆಗಿತ್ತು. ಈ ಹೋರಾಟದಲ್ಲಿ ಕಾಣಿಸಿಕೊಂಡ ಮಹಿಳೆಯರೆಲ್ಲರೂ ಉನ್ನತ ವರ್ಗದವರು ಮತ್ತು ಶಿಕ್ಷಿತರು. ಆದರೆ ಸ್ವಾತಂತ್ರ್ಯಕ್ಕಾಗಿ ಕುಟುಂಬದ ಪುರುಷರು ಜೈಲು ಸೇರಿದ ಸಂದರ್ಭದಲ್ಲಿ ಮನೆಯ ಜವಬ್ದಾರಿಯನ್ನು ನಿಭಾಯಿಸುವ ಕಾರ್ಯ ಸ್ತ್ರೀಯರಿಗೆ ಬಿತ್ತು. ವಿದ್ಯಾಭ್ಯಾಸವಿಲ್ಲದೆ ಸ್ವಾತಂತ್ರ ಆರ್ಥಿಕ ಸ್ವಾಮರ್ಥ್ಯವಿರದ ಅಲ್ಲದೆ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಇದ್ದು ಆಸ್ತಿಯನ್ನು ಕಳೆದುಕೊಂಡು ಸಂಕಷ್ಟಗಳನ್ನು ಅನುಭವಿಸಿದ ಮಹಿಳೆಯರ ತ್ಯಾಗಗಳು ಸುತ್ಸಾರ್ಹವೇ.

**೧) ಶ್ರೀಮತಿ ಸರೋಜಿನಿ ನಾಯ್ಡು ಅವರ ಬೇಟಿ**

ಶ್ರೀಮತಿ ಸರೋಜಿನಿ ನಾಯ್ಡು ಅವರು ೧೯೨೨ ರಲ್ಲಿ ಮಂಗಳೂರಿಗೆ ಭೇಟಿ ನೀಡಿದ್ದರು. ಅವರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ರಾಜಕೀಯ ಸಮ್ಮೇಳನ ಮಂಗಳೂರಿನಲ್ಲಿ ನಡೆಯಿತು. (೭) ಇದು ಸ್ವಾತಂತ್ರ್ಯ ಹೋರಾಟಕ್ಕೆ ವಿಶೇಷ ಚಾಲನೆಯಲ್ಲಿ ನೀಡಿತು ೧೮೯೯ – ೧೯೭೧ ಇದರ ಪರಿಣಾಮವಾಗಿ ಅನೇಕ ಮಹಿಳೆಯರು, ಮುದುಕಿಯರೂ ಸೇರಿದಂತೆ ಕಾಂಗ್ರೇಸ್ ನ ಸದಸ್ಯರಾದರು

**೨) ನಾಯಕತ್ವ ವಹಿಸಿದ ಮಹಿಳೆಯರು**

**ಲಕ್ಷ್ಮೀ ರೈ:**

ಲಕ್ಷ್ಮೀ ರೈ ಅವರು ಕಾಸರಗೋಡು ತಾಲೂಕಿನ (ಕಾಸರಗೋಡು ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾಗಿತ್ತು). ಹೇರೂರು ಗ್ರಾಮದ ಗುತ್ತು ಮಂಜಣ್ಣ ಶೆಟ್ಟಿ ಮತ್ತು ಅಬ್ಬಕ್ಕ ಶೆಟ್ಟಿ ಅವರ ಪುತ್ರಿ, ಬೆಳ್ಳಿಪ್ಪಾಡಿ ಮನೆತನದ ವೆಂಕಪ್ಪ ರೈ ಇವರ ಪತಿ.

೧೯೩೨ ರಲ್ಲಿ ಉಪ್ಪಿನ ಸತ್ಯಾಗ್ರಹ ನಡೆಯುತ್ತಿದ್ದ ಕಾಲದಲ್ಲಿ ವೆಂಕಪ್ಪ ರೈ ಮತ್ತು ಲಕ್ಷೀ ರೈ ಸ್ವಾತಂತ್ರ ಹೋರಾಟ ನಡೆಸಿ ಜೈಲು ಸೇರಿದರು ಅವರು ತಾ: ೧೪.೪ ೧೯೩೨ ರಿಂದ ೧೩-೦೮ ರ ವರೆಗೆ ಕಾರಾಗೃಹ ವಾಸ ಅನುಭವಿಸಿದರು. ಲಕ್ಷ್ಮೀ ರೈ ಅವರು ಜೈಲುಸೇರುವಾಗ ಗರ್ಭಿಣಿಯಾಗಿದ್ದರು. ಆ ಅವಧಿಯಲ್ಲಿಯೇ ಅವರು ಮಗುವೊಂದನ್ನು ಪಡೆದರು ಎಂಬ ವಿಚಾರ ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ" (ಪ್ರಕಾಶಕರು ಕರ್ನಾಡ ಸದಾಶಿವ ರಾವ್ ಸ್ಮಾರಕ್ ಟ್ರಸ್ಟ್) ಎಂಬ ಪುಸ್ತಕದಲ್ಲಿವೆ. ಆದರೆ ಇದು ಸತ್ಯವಲ್ಲ ಅವರು ಸ್ವಾತಂತ್ರ್ಯ ಹೋರಾಟ ಮಾಡಿ ಜೈಲಿಗೆ ಹೋದದ್ದು ೧೯೩೧ ರಲ್ಲಿ, ಜೈಲುವಾಸ ಅನುಭವಿಸಿದ್ದು, ೧೪.೪.೧೯೩೧ ರಿಂದ ೧೩.೦೮.೧೯೫೧ ರ ವರೆಗೆ ಎಂದು ಅವರ ಪುತ್ರ ರಮನಾಥ ರೈ ಅವರು ಹೇಳುತ್ತಾರೆ. ಆಗ ಅವರು ತಮ್ಮನ್ನು ಚಿಕ್ಕಪ್ಪ ತಿಮ್ಮಪ್ಪ ರೈ ಅವರ್ ಮಡಿಲಿಗೆ ಹಾಕಿದರು ಎಂದು ತಿಳಿಸುತ್ತಾರೆ.

ಲಕ್ಷ್ಮೀ ರೈ ಅವರು ತಮ್ಮ ಪತಿ ವೆಂಕಪ್ಪ ರೈ ಅವರ ಜೊತೆ ಗಾಂಧೀಜಿಯವರ ಜಿಲ್ಲೆಯ ಮೂರನೆಯ ಭೇಟಿ ಸಂದರ್ಭದಲ್ಲಿ ಆಯೋಜಿಸಿದ್ದ ಪುತ್ತೂರಿನ ಸಾರ್ವಜನಿಕ ಸಭೆಯನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಮಗ ಕುಶಲ ನಾಥನ (ಆಗ ಪುಟ್ಟ ಬಾಲಕ) ಕೈಯಲ್ಲಿದ್ದ ಚಿನ್ನದ ಬಳೆ ಹಾಗೂ ಕುತ್ತಿಗೆಯಲ್ಲಿದ್ದ ಹಾರಾವನ್ನು ಗಾಂಧೀಜಿಯ ಕೈ ಗಿತ್ತರು. ಈ ತಾಯಿ ಹೋದಲೆಲ್ಲಾ ಈ ಮಗ ಕುಶಲನಾಥನೂ ಹೋಗುತ್ತಿದ್ದ. ಅವರ ಕೊನೆಯ ಪುತ್ರ ಕುಶಲ ನಾಥ ರೈ ಅವರಿಗೀಗ ೭೬ ವರ್ಷ ಪ್ರಾಯ. ಅವರು ಉನ್ನತ ಲಿಬಿಯಾದಲ್ಲಿ ಆಯಿಲ್ ಕಾರ್ಪೊರೇಶನ್ ನಲ್ಲಿ ಸಲಹೆಗಾರರಾಗಿ ಕಾರ್ಯನಿರ್ವಹಿಸಿ ಇದೀಗ ನಿವೃತ್ತರಾಗಿ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಲಕ್ಷ್ಮೀ ರೈ ಅವರು ತಾ: ೮.೧೨.೧೯೭೧ ರಲ್ಲಿ ಮುಂಬಾಯಿ ಯಲ್ಲಿ ತಮ್ಮ ಮಗಳು ಶಾರದ ರೈ ಅವರ ಮನೆಯಲ್ಲಿ ನಿಧನ ಹೊಂದಿದರು. (೯)

**ಸುಗುಣ ಕಾರ್ನಾಡ್ ದೇಸಾಯಿ:**

ಶ್ರೀ ಸದಾಶಿವ ಕಾರ್ನಾಡ್ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ ಮುಂದಾಳು, ಅವರ ಕುಟುಂಬ ವಿಡೀ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿತ್ತು. ಇದನ್ನು ಶ್ರೀಮತಿ ಸುಗುಣ ಕಾರ್ನಾಡ್ ದೇಸಾಯಿ ಯವರು ಸ್ವಾತಂತ್ರ್ಯ ಸಂಗ್ರಮದ ಸ್ಫೂರ್ತಿಗಳು ಎನ್ನುವ ಗ್ರಂಥಕ್ಕೆ ತಾವು ಬಂದ ಲೇಖನದಲ್ಲಿ ತಿಳಿಸಿರುತ್ತಾರೆ. ಈ ಲೇಖನದಲ್ಲಿ ತಿಳಿಸಿದಂತೆ ಸುಗುಣ ಕಾರ್ನಾಡ್ ದೇಸಾಯಿ ಮತ್ತು ಅವರ ಅಕ್ಕ ರಾಧಾ ಕಾರ್ನಾಡ್ ದೇಸಾಯಿ ತಮ್ಮ ತಂದೆಯವರ ಜೊತೆಗೆ ಸ್ವಾತಂತ್ರ್ಯ ಹೋರಾಟದ ಎಲ್ಲಾ ಚಟುವಟಿಕೆಳಲ್ಲಿಯೂ ಭಾಗವಹಿಸಿದ್ದರು.

ಸ್ವದೇಶಿ ಆಂದೋಲನದಂತೆ ವಿದೇಶಿ ವಸ್ತ್ರಗಳನ್ನು ಸುಡಲು ಕಾರ್ನಾಡ್ ಸದಾಶಿವರಾಯರು ಕರೆಕೊಟ್ಟಿದ್ದರು. ಅದರಂತೆ ತಮ್ಮ ಕುಟುಂಬದವರ ಎಲ್ಲರ ವಿದೇಶಿ ಬಟ್ಟೆಗಳನ್ನು ಸುಡಲಾಯಿತು ಎಂದು ಶ್ರೀಮತಿ ಸುಗುಣಾ ತಿಳಿಸಿರುತ್ತಾರೆ. (೧೦)

೧೯೨೦ ರಲ್ಲಿ ಗಾಂಧೀಜಿಯವರು ಮಂಗಳೂರಿನ ನೆಹರೂ ಮೈದಾನದ ಸಭೆಯಲ್ಲಿ ಭಾಷಣ ಮಾಡುವ ಸಂಧರ್ಭದಲ್ಲಿ ಸುಗುಣ ಅವರು ಗಾಂಧೀಜಿ ಯವರಿಗೆ ಹಾರ ಹಾಕಿದರು. ಈ ಸಂದರ್ಭದಲ್ಲಿ ಇವರು ತಮ್ಮ ಅಕ್ಕನ ಜೊತೆ ಸೇರಿ ತಮ್ಮ ಆಭರಣಗಳನ್ನು ಗಾಂಧೀಜಿಯವರಿಗೆ ಸಮರ್ಪಿಸಿದರು. ಇದರಿಂದ ಪ್ರೇರಣೆಗೊಂಡ ಇತರ ಮಹಿಳೆಯರು ತುಂಬಿದ ಜನ ಜಂಗುಳಿಯಲ್ಲಿ ಒಬ್ಬರ ನಂತರ ಒಬ್ಬರಂತೆ ಎದ್ದು ಹೋಗಿ ತಮ್ಮ ಆಭರಣಗಳನ್ನು ಗಾಂಧೀಜಿಯವರಿಗೆ ಕಿತ್ತುಕೊಟ್ಟರೆಂದು ಸುಗುಣರವರು ನೆನಪಿಸುತ್ತಾರೆ. ಸ್ವದೇಶೀ ಆಂದೋಲನ ಕರೆಯಂತೆ ಸರಕಾರದ ಶಾಲೆಗಳನ್ನು ತ್ಯಜಿಸಲಾಯಿತು. ರಾಧ ಕಾರ್ನಾಡ್ ಕಾನ್ವೆಂಟ್ ಶಿಕ್ಷಣವನ್ನು ತೊರೆದರು. ಸದಾಶಿವ ರಾವ್ ಅವರ ಮನೆಯಲ್ಲಿ ಟಿಳಕ ವಿದ್ಯಾಲಯವೆಂಬ ರಾಷ್ಟ್ರೀಯ ಶಾಲೆ ಆರಂಭವಾಯಿತು. ಇಲ್ಲಿಯೇ ತಾವು ಅಕ್ಕ ಇವರ ವಿದ್ಯಾರ್ಥಿಗಳೊಡನೆ ಕಲಿಯುತ್ತಿದ್ದವು ಎಂದು ಸುಗುಣ ತಿಳಿಸುತ್ತಾರೆ. ಈ ಸಂದರ್ಭದಲ್ಲಿ ಸ್ವದೇಶಿ ಅಂದೋಲನವನ್ನು ಪ್ರಚಾರ ಪಡಿಸಲು ಸುಗುಣ ಅವರ ಅಕ್ಕ ಮತ್ತು ತಾಯಿ ಕಾರ್ಯನಿರ್ವಹಿಸುತ್ತಿದ್ದರು.

ಸದಾಶಿವ ರಾವ್ ಅವರ ಮನೆಯೇ ರಾಜಕೀಯ ಚಟುವಟಿಕೆಗಳಿಗೆ ಕೇಂದ್ರವಾಯಿತು. ಮಹಿಳಾ ಸಭಾ ರಚನೆಯೂ ಅವರ ಮನೆಯಲ್ಲಿಯೇ ಆಯಿತು. ಸದಾಶಿವರಾವ್ ಅವರ ಚಟುವಟಿಕೆಗಳಿಗೆ ಅವರ ಮನೆಯ ಎಲ್ಲಾ ಮಹಿಳಾ ಸದಸ್ಯರು ಸಮರ್ಪಕವಾಗಿ ಸಹಕರಿಸಿದ್ದರು. ಶುದ್ಧ ಸಂಪ್ರದಾಯ ಬದ್ಧರಾಗಿದ್ದ ಅವರ ತಾಯಿಯೂ ಸದಾಶಿವರಾಯರ ದಲಿತೋದ್ಧಾರ ಕಾರ್ಯಕ್ರಮಗಳನ್ನು ಒಪ್ಪಿಕೊಂಡಿದ್ದರು.(೧೧)

ಉಪ್ಪಿನ ಸತ್ಯಾಗ್ರಹ ಸಂದರ್ಭದಲ್ಲಿ ಕಾರ್ನಾಡ್ ಸೋದರಿಯರು ನಿತ್ಯವೂ ಕಡಲ ತೀರಕ್ಕೆ ಹೋಗಿ ಉಪ್ಪನ್ನು ತಯಾರಿಸುತ್ತಿದ್ದರು. ಘೋಷಣೆ ಕೂಗಿ ಉಪ್ಪನ್ನು ಏಲಂ ಮಾಡಿ ಕಾಂಗ್ರೇಸ್ ಫಂಡಿಗೆ ಹಣ ಕೂಡಿಸುತ್ತಿದ್ದರು. ಸಾರಾಯಿ ಅಂಗಡಿಗಳ ಪಿಕೆಟಿಂಗ್ ಗೂ ಅವರು ಹೋಗುತ್ತಿದ್ದರು. ಸ್ವಾತಂತ್ರ್ಯ ಹೋರಾಟದಿಂದಾಗಿ ತಮ್ಮ ಹಿರಿಯರ ಮನೆಯನ್ನು ಕಳೆದುಕೊಂಡ ಸದಾಶಿವ ರಾವ್ ಅವರ ಕುಟುಂಬ ಬಾಡಿಗೆ ಮನೆಯಲ್ಲಿ ವಾಸಿಸುವ ಪರಿಸ್ಥಿತಿ ಬಂದಾಗಲೂ ಸದಸ್ಯರೆಲ್ಲರೂ ಸಹಕರಿಸಿದ್ದರು. ಕರಾನಿರಾಕರಣೆ ಸಂದರ್ಭದಲ್ಲಿ ಮನೆ ಮಾರುಗಳನ್ನು

ಕಳೆದುಕೊಂಡವರ ನೆರವಿಗಾಗಿ ಸದಾಶಿವರಾಯರು ಮುಂಬೈಗೆ ಹೋಗಿ ನಿಧಿ ಸಂಗ್ರಹಿಸುತ್ತಿದ್ದಾಗ ಸುಗುಣಾ ಅವರು ಜೊತೆಗಿದ್ದರು.

ಸುಗುಣ ಕಾರ್ನಾಡ್ ಅವರು ಒಂದು ಸಂದರ್ಭದಲ್ಲಿ ಪೋಲೀಸರಿಗೆ ಪ್ರತಿಭಟನೆ ತೋರಿದ್ದರು ಸದಾಶಿವ ರಾವ್ ಅವರು ಬಂಧಿತರಾಗಿದ್ದಾಗ ಸುಗಣಾರಿಗೆ ತಮ್ಮ ಒಂದು ಕೈಪೆಟ್ಟಿಗೆಯನ್ನು ಒಪ್ಪಿಸಿ ಪೋಲೀಸರ ಕೈಗೆ ಬೀಳದಂತೆ ನೋಡುವ ಜವಬ್ದಾರಿಯನ್ನು ವಹಿಸಿದ್ದರು. ಇದರಲ್ಲಿ ಸತ್ಯಾಗ್ರಹಕ್ಕೆ ಸಂಬಂಧಪಟ್ಟ ದಾಖಲೆಗಳಿದ್ದವು ಪೋಲೀಸರು ಸದಾಶಿವ ರಾಯರ ಮನೆಯನ್ನು ಜಪ್ತಿಮಾಡಿದಾಗ ಈ ಪೆಟ್ಟಿಗೆಯನ್ನು ತೆರೆಯಲು ಹೇಳಿದರು ಆದರೆ ಸುಗುಣಾ ಅದನ್ನು ತೆರೆಯಲು ಒಪ್ಪಲಿಲ್ಲ ಪೋಲೀಸರು ಎಷ್ಟೇ ಬೆದರಿಸಿದರು ಧೈರ್ಯವಾಗಿ "ಆ ಪೆಟ್ಟಿಗೆ ನನ್ನದು ಅದನ್ನು ಶೋಧಿಸುವ ಹಕ್ಕು ನಿಮಗಿಲ್ಲ" ಎಂದೇ ಪ್ರತಿಭಟನೆ ತೋರಿದರು ಈ ಬಗ್ಗೆ ಪತ್ರಿಕೆಗಳು ವರದಿ ಮಾಡಿದ್ದವು. (೧೨) ಇಲ್ಲಿ ಅವರ ಅಸಾಧಾರಣ ಧೈರ್ಯ ವ್ಯಕ್ತವಾಯಿತು.

ತಮ್ಮ ತಂದೆ ಕಾಂಗ್ರೆಸಿನ ಕಾರ್ಯಕ್ಕಾಗಿ ಹಣ ಮನೆ ಆಸ್ತಿ ಎಲ್ಲವನ್ನೂ ಕಳೆದುಕೊಂಡರು ಎಂದೆಂದೂ ಶಾಂತವಾಗಿದ್ದರು. ನಿಧನದ ಸಂದರ್ಭದಲ್ಲಿ ಕೃಷಕಾಯರಾಗಿದ್ದ ತಂದೆ ಸೇವೆಯನ್ನು ಎಲ್ಲರಿಗೂ ಕೊಟ್ಟು ಹೋದರು ಎಂದು, ಸುಗುಣಾ ನೆನಪಿಸುತ್ತಾರೆ.

**ಕಮಲಾ ದೇವಿ ಚಟ್ಟೋಪಾಧ್ಯಾಯ**

ರಾಷ್ಟ್ರೀಯ ಹೋರಾಟಕ್ಕಾಗಿ ಅಖಿಲ ಭಾರತ ಮಟ್ಟದಲ್ಲಿ ದುಡಿದ ಮಹಿಳೆ ಕಮಲಾ ದೇವಿ ಚಟ್ಟೋಪಧ್ಯಾಯ. ದಕ್ಷಿಣಕನ್ನಡ ದಲ್ಲಿ ಮಾತ್ರವಲ್ಲದೆ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಇವರಿಗೆ ಅಗ್ರಸ್ಥಾನ ದೊರೆತಿದೆ. ಇವರು ಏಪ್ರಿಲ್ ೩, ೧೯೦೩ ರಂದು ಮಂಗಳೂರಿನ ಒಂದು ಶ್ರೀಮಂತ ಕುಟುಂಬದಲ್ಲಿ ಜನಿಸಿದರು. ಇವರು ಅನಂತಯ್ಯ ಮತ್ತು ಗಿರಿಜಮ್ಮ ದಂಪತಿಗಳ ಕೊನೆಯ ಮತ್ತು ನಾಲ್ಕನೆಯ ಪುತ್ರಿಯಾಗಿದ್ದರು. ಬಾಲ್ಯದಲ್ಲಿಯೇ ಅವರು ತಮ್ಮ ಚಿಂತನಾ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತಿದ್ದರು. ತಾಯಿಯವರು ಹೇಳುವ ಎಲ್ಲಾ ಕೆಲಸವನ್ನು ಮಾಡುವ ಮೊದಲು ಪ್ರಶ್ನಿಸುವ ಮನೋಭಾವನ್ನು ಅವರು ಬೆಳೆಸಿಕೊಂಡಿದ್ದರು. ಅವರ ತಾಯಿಯವರು ಪ್ರಗತಿ ಪರ ಮನೋಭಾವನೆಯನ್ನು ಬೆಳೆಸಿಕೊಂಡಿದ್ದರೂ ಒಮ್ಮೊಮ್ಮೆ ಮಗಳ ಸ್ವಭಾವ ಅವರಿಗೆ ಚಿಂತೆಯನ್ನುಂಟುಮಾಡುತ್ತಿತ್ತು. (೧೩)

ಕಮಲಾದೇವಿಯವರಿಗೆ ಬಾಲ್ಯದಲ್ಲಿಯೇ ವಿವಾಹವಾಗಿತ್ತು, ಆದರೆ ಆಕೆ ಗಂಡನ ಮನೆಯನ್ನು ಪ್ರವೇಶಿಸುವ ಮೊದಲೇ ವಿಧವೆಯಾಗಿದ್ದರು. ಮುಂದೆ ಅವರು ಹರೀಂದ್ರನಾಥ

ಚಟ್ಟೋಪಾಧ್ಯಾಯ ಮತ್ತು ಇಂಗ್ಲೀಷ್ ಮಹಿಳೆ ಮಾರ್ಗರೇಟ್ ಕಜಿನ್ಸ ಎಂಬ ಇಬ್ಬರು ಪ್ರಗತಿಪರ ವ್ಯಕ್ತಿಗಳ ಪ್ರಭಾವಕ್ಕೆ ಒಳಗಾದರು. ಶ್ರೀಮತಿ ಅನಿಬೆಸೆಂಟ್ ಅವರು ಕಮಲಾದೇವಿ ಅವರ ಮೇಲೆ ಪ್ರಭಾವ ಬೀರಿದ ಇನ್ನೊಬ್ಬ ವ್ಯಕ್ತಿ. ಮಂಗಳೂರಿನಲ್ಲಿ ಅನಿಬೆಸೆಂಟ್ ಅವರ ಭಾಷಣ ಕೇಳಿದ ಕಮಾಲಾದೇವಿಯವರ ಸುಪ್ತ ಚೇತನ ಜಾಗೃತವಾಯಿತು. ಕಮಾಲಾದೇವಿಯವರನ್ನು ಅವರ ತಾಯಿ ಅನಿಬೆಸೆಂಟ್ ಅವರ ಬಳಿ ಕರೆದುಕೊಂಡು ಹೋಗಿ ಆಶೀರ್ವದಿಸಬೇಕೆಂದು ಕೇಳಿಕೊಂಡರು. ಅನಿಬೆಸೆಂಟ್ ಅವರು ಕಮಲಾದೇವಿಯವರಿಗೆ ದೇಶಕ್ಕಾಗಿ ಹೋರಾಡು ಎಂದು ಸಲಹೆ ಇತ್ತರು. “ದೇಶ ಸೇವೆಗೆ ನೀನೂ ಕಂಕಣ ಕಟ್ಟು” ಎಂದು ಹೇಳಿದರು. ಮಂಗಳೂರಿನಲ್ಲಿ ಗಾಂಧೀಜಿಯವರ ಭಾಷಣ ಕೇಳಿದ ಕಮಲಾದೇವಿಯವರು ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಲು ಇನ್ನೂ ಹೆಚ್ಚಿನ ಪ್ರೇರೇಪಣೆಯನ್ನು ಪಡೆದುಕೊಂಡರು. (೧೪)



ಹರೀಂದ್ರನಾಥ್ (ಸರೋಜಿನಿ ನಾಯ್ಡು ಅವರ ಸಹೋದರ) ಅವರೊಂದಿಗಿನ ವಿವಾಹ ಕಮಲಾದೇವಿ ಅವರ ಜೀವನದ ಗತಿಯನ್ನೇ ಬದಲಿಸಿತು. ಆ ಕಾಲದಲ್ಲಿ ಈ ವಿವಾಹ ಸಂಪ್ರದಾಯವಾದಿಗಳ ಕೆಂಗೆಣ್ಣಿಗೆ ಕಾರಣವಾಯಿತು. ಹರೀಂದ್ರನಾಥ್ ಅವರನ್ನು ಮದುವೆಯಾದ ಕಮಲಾದೇವಿಯವರು ಸರೋಜಿನಿ ನಾಯ್ಡು ಅವರ ನಾದಿನಿಯಾದರು. ಇದರಿಂದ ಅವರಿಗೆ ಅಖಿಲ ಭಾರತ ಮಟ್ಟದಲ್ಲಿ ಕಾರ್ಯನಿರ್ವಹಿಸುವುದು ಸಾಧ್ಯವಾಯಿತು.

ಕಮಲಾದೇವಿಯವರಿಗೆ ಗಾಂಧೀಜಿಯವರೊಂದಿಗೆ ಸಂಪರ್ಕಕ್ಕೆ ಅವಕಾಶವಾದದ್ದು, ೧೯೨೪ ರ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ. ಆ ಸಂದರ್ಭದಲ್ಲಿ ಅವರಿಗೆ ಗಾಂಧೀಜಿಯವರ ಅಹಿಂಸಾ ತತ್ವಗಳಲ್ಲಿ ಪೂರ್ಣ ವಿಶ್ವಾಸವಿರಲಿಲ್ಲ. ಈ ವಿಷಯವನ್ನರಿತ ಗಾಂಧೀಜಿಯವರು ಅವರಿಗೆ ಪತ್ರ ಬರೆದು ಈ ರೀತಿ ತಿಳಿಸಿದರು “ನಿನಗೆ ಅಹಿಂಸೆಯಲ್ಲಿ ವಿಶ್ವಾಸವಿಲ್ಲದಿರುವುದರಿಂದ ನೀನು ಚಳುವಳಿಯಿಂದ ದೂರವಿರಬೇಕು”. ಇದನ್ನು ಓದಿದ ಕಮಲಾದೇವಿಯವರು ತನ್ನ ನಿಲುವು ಬದಲಾಯಿಸಿಕೊಂಡರು. ಬಾಪುವಿನಿಂದ ಹೊರತಾಗಿ ಸ್ವಾತಂತ್ರಕ್ಕಾಗಿ ಯಾರಿಂದಲೂ ಹೋರಾಡಲೂ ಸಾಧ್ಯವಿಲ್ಲ ಎಂದು ಪರಿಗಣಿಸಿದರು. (೧೫)

ಬಾಲ್ಯದಿಂದಲೇ ಸಾಹಸ ಮತ್ತು ಧೈರ್ಯಗುಣಗಳನ್ನು ಬೆಳೆಸಿಕೊಂಡಿದ್ದ ಕಮಲಾ ದೇವಿಯವರ ರಾಷ್ಟ್ರೀಯ ಹೋರಾಟದಲ್ಲಿ ಇಂತಹ ಒಂದು ಘಟನೆ ನಡೆದಿತ್ತು. ಅದು ೧೯೩೦ ಜನವರಿ ೨೬ ರಂದು ಮುಂಬೈ ಆಜಾದ್ ಬಯಲಿನಲ್ಲಿ ನಡೆದ ಸಭೆಯಲ್ಲಾಗಿತ್ತು. ಅಲ್ಲಿ ತ್ರಿವರ್ಣ ಧ್ವಜದ ಬದಲಿಗೆ ಕಮ್ಯುನಿಸ್ಟರು ಕೆಂಪು ಧ್ವಜವನ್ನು ಏರಿಸಲು ಪ್ರಯತ್ನಿಸಿದ್ದರು. ಸಿಟ್ಟಿಗೆದ್ದ ಒಂದು

ಗುಂಪು ತ್ರಿವರ್ಣ ಧ್ವಜವನ್ನು ಹಿಡಿದೆಳೆಯಲು ಧ್ವಜ ಸ್ತಂಭದೆಡೆಗೆ ಧಾವಿಸಿತು. ಆಗ ದೇಶಭಕ್ತೆ ಕಮಲಾದೇವಿಯು ಧ್ವಜದ ರಕ್ಷಣೆಗಾಗಿ ಧಾವಿಸಿದರು. ಧ್ವಜ ಸ್ತಂಭವನ್ನು ಗಟ್ಟಿಯಾಗಿ ಹಿಡಿದುಕೊಂಡು ನಿಂತರು. ಅವರ ಬಾಹು ಮತ್ತು ಕೈಗಳ ಮೇಲೆ ಉಗುರುಗಳ ಗಾಯಗಳಾಗಿತ್ತು. (೧೬). ಅವರ ದೇಶಭಕ್ತಿ ಇದಾವುದನ್ನೂ ಲೆಕ್ಕಿಸದಂತೆ ಮಾಡಿತ್ತು. ಒಬ್ಬ ಮಹಿಳೆಯಾಗಿ ಕಮಲಾದೇವಿ ಇಷ್ಟೊಂದು ಸಾಹಸದ ಕೆಲಸ ನಿರ್ವಹಿಸಿದ್ದು ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸುತ್ತಿದ್ದ ಎಲ್ಲರಿಗೂ ಪ್ರೇರೇಪಣೆಯಾಗಿತ್ತು.

**ಉಪ್ಪಿನ ಸತ್ಯಾಗ್ರಹದಲ್ಲಿ ಕಮಲಾದೇವಿಯವರ ಪಾತ್ರ**

ಉಪ್ಪಿನ ಸತ್ಯಾಗ್ರಹ ನಡೆಯುತ್ತಿದ್ದ ಸಂದರ್ಭದಲ್ಲಿ ಗಾಂಧೀಜಿಯವರು ಮಹಿಳೆಯರನ್ನು ಸೇರಿಸಿಕೊಳ್ಳಲು ನಿರಾಕರಿಸಿದ್ದರು. ಮಹಿಳೆಯರ ವಿಷಯದಲ್ಲಿ ಆದರ ಭಾವನೆ ಹೊಂದಿದ್ದ ಬ್ರಿಟೀಷರು ಅವರ ಮೇಲೆ ಕೈ ಎತ್ತಲು ಹಿಂದು–ಮುಂದು ನೋಡುತ್ತಾರೆಂಬ ವಿಷಯ ಗಾಂಧೀಜಿಯವರಿಗೆ ತಿಳಿದಿತ್ತು. ಅವರ ವಿರುದ್ಧ ನಡೆಯುತ್ತಿರುವ ದಂಡೀಯಾತ್ರೆಯಲ್ಲಿ ಮಹಿಳೆಯರನ್ನು ಸೇರಿಸಿಕೊಳ್ಳುವುದು ಹೇಡಿತನದ ಲಕ್ಷಣ ಎಂದವರು ಭಾವಿಸಿದ್ದರು. ಆದರೆ ಕಮಲಾದೇವಿಯವರು ಗಾಂಧೀಜಿಯವರನ್ನು ಕಂಡು ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಲು ಅನುಮತಿಯನ್ನು ಕೊಡಬೇಕೆಂದು ಕೇಳಿಕೊಂಡರು. ಅನುಮತಿ ಸಿಕ್ಕಿದೊಡನೆಯೇ ಕಮಾಲಾದೇವಿಯವರು ಅವಂತಿಕ ಕಾ ಬಾಯಿ ಮತ್ತು ಇತರ ಕಾರ್ಯಕರ್ತರೊಂದಿಗೆ ಅರಬೀ ಸಮುದ್ರದ ದಂಡೆಗೆ ಹೋದರು. ಮಡಕೆಗಳಲ್ಲಿ ಸಮುದ್ರದ ನೀರನ್ನು ತುಂಬಿ ಕೊಂಡು ಬಂದು ಉಪ್ಪನ್ನು ತಯಾರಿಸಿದರು. ಪೋಲಿಸರಿಂದ ಲಾಠಿಪ್ರಹಾರ ನಡೆದ ಪರಿಣಾಮವಾಗಿ ಕಮಲಾದೇವಿಯವರು ಪೆಟ್ಟುತಿಂದರು. ಸಂಗ್ರಹಿಸಿದ ಉಪ್ಪನ್ನು ಚಿಕ್ಕ ಚಿಕ್ಕ ಪ್ಯಾಕೇಟುಗಳಲ್ಲಿ ಹಾಕಿ ಮನೆ ಮನೆಗೆ ಹೋಗಿ ಮಾರತೊಡಗಿದರು. ಆ ಮೂಲಕ ಸ್ವಾತ್ರಂತ್ರ್ಯ ಹೋರಾಟಕ್ಕೆ ಜನರನ್ನು ಹುರಿದುಂಬಿಸುತ್ತಿದ್ದರು. (೧೭).

ಕಮಲಾದೇವಿಯವರ ಚಟುವಟಿಕೆಗಳನ್ನು ಗಮನಿಸಿದ ಬ್ರಿಟೀಷ್ ಸರಕಾರ ಅವರನ್ನು ಬಂಧಿಸಿತು. ಇವರು ಜೈಲನ್ನು ಪ್ರವೇಶಿಸಿದ್ದು ೧೯೩೦ ಮೇ ೧೭ ರಂದು, ಒಟ್ಟಾರೆ ಒಂಭತ್ತು ತಿಂಗಳು ಹದಿನೈದು ದಿನಗಳ ಜೈಲು ವಾಸವನ್ನು ಅವರಿಗೆ ವಿಧಿಸಲಾಗಿತ್ತು. ರಾಜಕೀಯ ಕೈದಿಗಳಿಗಾಗಿ ಪ್ರತ್ಯೇಕ ವ್ಯವಸ್ಥೆಯಲ್ಲಿದ್ದ ಆ ಕಾಲದಲ್ಲಿ ಕಮಾಲಾದೇವಿಯವರು ಅದಕ್ಕಾಗಿಯೇ ಹೋರಾಡಿದರು.

೧೯೩೧ ರಲ್ಲಿ ಗಾಂಧೀಜಿಯವರು ಪುನಹ ಬಹಿಷ್ಕಾರ ಆಂದೋಲನಗಳನ್ನು ಪ್ರಾರಂಭಿಸಿದ್ದರು. ಆಗ ಕಮಲಾದೇವಿಯವರು ಮುಂಬಯಿಯ ಬೋರಿವಿಲಿ ಸೇವಾದಳದ ಶಿಬಿರಗಳನ್ನು ನಡೆಸುತ್ತಿದ್ದರು. ಶಿಬಿರಗಳನ್ನು ಹಠಾತ್ತಾಗಿ ನಿಲ್ಲಿಸಿದ ಮೇಲೆ ಸ್ವಯಂ ಸೇವಿಕೆಯರನ್ನು ಅವರವರ ಮನೆಗಳಿಗೆ ಮುಟ್ಟಿಸುವ ಕಾರ್ಯದಲ್ಲಿ ನಿರತರಾಗಿದ್ದಾಗ ಇವರ ಮೇಲೆ ದೇಶದ್ರೋಹದ ಮತ್ತು ಶಾಂತಿ ಭಂಗದ ಆರೋಪಗಳನ್ನು ಹೊರಿಸಿ ಬಂಧಿಸಲಾಯಿತು. ಈ ಬಾರಿ ಅವರಿಗೆ ಹದಿನೆಂಟನೆ ತಿಂಗಳುಗಳ ಸಶ್ರಮ ಶಿಕ್ಷೆಯನ್ನು ವಿಧಿಸಿ ಬೆಳಗಾವಿಯ ಹಿಂಡಲಗಾ ಜೈಲಿನೊಳಗೆ ಇಡಲಾಯಿತು. ಅಲ್ಲಿ ಅತ್ಯಂತ ಹೀನಾಯ ಪರಿಸ್ಥಿತಿಯನ್ನವರು ಎದುರಿಸಬೇಕಾಯಿತು. ಅಲ್ಲಿಯೂ ಅವರು ಸತ್ಯಾಗ್ರಹಗಳಿಗೆ ಸವಲತ್ತುಗಳನ್ನು ದೊರಕಿಸಿ ಕೊಡಲು ಹೋರಾಡಿದರು.

೧೯೩೩ರಲ್ಲಿ ಅವರು ಬಿಡುಗಡೆಗೊಂಡ ನಂತರ ಮಂಗಳೂರಿಗೆ ಹಿಂದಿರುಗುವವರಿದ್ದರು. ಆದರೆ ಶ್ರೀ ಕಾಲೇಶ್ವರ ರಾವ್ ಅವರ ಆತಿಥ್ಯದಂತೆ ಗುಡಿವಾಡಕ್ಕೆ ಹೊರಟರು. ಗುಡಿವಾಡಕ್ಕೆ ಬಂದೊಡನೆ ಸರಕಾರವು ಮತ್ತೆ ಇವರನ್ನು ವಿಶೇಷ ಅಧಿಕಾರದ ಸಹಾಯದಿಂದ ಬಂಧಿಸಿತು. ಅವರನ್ನು ವೆಲ್ಲೂರಿನ ಜೈಲಿನಲ್ಲಿ ಇಡಲಾಯಿತು. ಸರಕಾರ ಅವರನ್ನು "ಶಿಷ್ಟಚಾರಕ್ಕಾಗಿ ಅನುಗುಣವಾಗಿ ನಡೆದುಕೊಳ್ಳುವೆ" ಎಂದು ಬರೆದುಕೊಟ್ಟು ಬಿಡುಗಡೆಗೊಳ್ಳಿರಿ ಎಂದು ಹೇಳಿತು. ಆದರೆ ಕಮಲಾದೇವಿಯವರು ಇದನ್ನು ತಿರಸ್ಕರಿಸಿದರು. (೧೮)

ಮುಂದೆ ೧೯೪೨ ರ "ಭಾರತ ಬಿಟ್ಟು ತೊಲಗಿರಿ" ಆಂದೋಲನದ ಸಂದರ್ಭದಲ್ಲಿ ಸರಕಾರ ಕಮಲಾದೇವಿಯವರನ್ನು ಬೆಂಗಳೂರಿನಲ್ಲಿ ಬಂಧಿಸಿತು. ೧೯೪೪ ವೈದ್ಯಕೀಯ ಕಾರಣಕ್ಕಾಗಿ ಅವರನ್ನು ಬಿಡುಗಡೆ ಗೊಳಿಸಲಾಯಿತು. ನಂತರ ಅವರು ಕಸ್ತೂರ್ ಬಾ ಮೇಮೊರಿಯಲ್ ಟ್ರಸ್ಟ್ ಮತ್ತು ಗಾಂಧೀ ಮೆಮೋರಿಯಲ್ ಟ್ರಸ್ಟ್‌ಗಳಿಗೆ ನಿಧಿ ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರು. (೧೯)

ಕಮಲಾದೇವಿಯವರು ಯಾವುದೇ ಅಧಿಕಾರದ ಆಸೆಯಿಲ್ಲದೆ ರಾಷ್ಟ್ರಕ್ಕಾಗಿ ಹೋರಾಡಿದ ಸಾಹಸಿ ಮಹಿಳೆ. ಮಂಗಳೂರಿನ ಮಹಿಳೆಯರೆಲ್ಲರಿಗೆ ಆದರ್ಶವಾಗಿದ್ದರು. ಇವರೊಬ್ಬ ಧೀಮಂತ ವ್ಯಕ್ತಿತ್ವದ ಮಹಿಳೆ ಎಂದು ಇಲ್ಲಿಯ ಜನ ಸ್ಮರಿಸುತ್ತಾರೆ. ಇವರ ನೆನಪಿಗೋಸ್ಕರ ಯಾವುದೇ ಕಾರ್ಯವನ್ನು ಸರಕಾರ ಮಾಡಿಲ್ಲ ಎನ್ನುತ್ತಾರೆ.

**ವಯಲೆಟ್ ಆಳ್ವ:**

ವಯಲೆಟ್ ಆಳ್ವ ಅವರು ಉಡುಪಿಯಲ್ಲಿ ಸ್ವಾತಂತ್ರ್ಯ ಹೋರಾಟರಾಗಿದ್ದ ಜೋಕಿಮ್ ಆಳ್ವ ಅವರ ಪತ್ನಿ ಅವರು ತಮ್ಮ ಪತಿಯ ರಾಜಕೀಯ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದರು. ಅವರು ಪ್ರಾರಂಭಿಸಿದ ಒಂದು ರಾಜಕೀಯ ವಾರಪತ್ರಿಕೆಯಲ್ಲಿ ಅವರು ಬ್ರಿಟೀಷರ ಆಡಳಿತವನ್ನು ನಿರ್ಭಯವಾಗಿ ಟೀಕಿಸುತ್ತಿದ್ದರು. ಇದರಿಂದ ಎಪ್ರಿಲ್ ೧೯೪೩ ರಲ್ಲಿ ವಯಲೆಟ್ ಆಳ್ವ ಅವರನ್ನು ಬಂಧಿಸಲಾಯಿತು. ಎರಡನೇ ಮಹಾಯುದ್ಧದ ಸಂಧರ್ಭದಲ್ಲಿ ಇವರ ಪತ್ರಿಕಾ ಕಛೇರಿಯನ್ನು ರಾಜ ದ್ರೋಹದ ದಾಖಲೆಗಳ ಸಂಗ್ರಹದ ಕಾರಣಕ್ಕಾಗಿ ಧಾಳಿಮಾಡಲಾಯಿತು. ಸರಕಾರ ಇವರ ಮೇಲೆ ದಂಡವನ್ನು ವಿಧಿಸಿತು. ಆದರೆ ಮುಂಬೈ ಹೈಕೋರ್ಟ್ ಇವರ ಮೇಲೆ ರಾಜ ದ್ರೋಹದ ಆರೋಪವನ್ನು ತಳ್ಳಿ ದಂಡವನ್ನು ಹಿಂದಿರುಗಿಸಲು ಸರಕಾರಕ್ಕೆ ಆದೇಶನೀಡಿ ಬಂಧಿಸಲಾಯಿತು. ಮತ್ತು ಇವರಿಗೆ ಎರಡು ತಿಂಗಳ ಜೈಲು ಶಿಕ್ಷೆಯನ್ನು ವಿಧಿಸಲಾಗಿತ್ತು. (೨೦)

**ನಿರುಪಮಾ ನಾಯಕ್**

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಬಾಲಿಕೆಯಾಗಿದ್ದ ನಿರುಪಮ ನಾಯಕ್ ಅವರು ಸ್ವಾತಂತ್ರ್ಯ ಹೋರಾಟಗಾರನಾಗಿದ್ದ ಉಡುಪಿಯ ಪಾಂಗಾಳದ ಮಂಜುನಾಥ ನಾಯಕ್ ಮತ್ತು ಮನೋರಮಾ ಅವರ ಪುತ್ರಿ, ಗಾಂಧೀಜಿಯವರಿಗೆ ಒಪ್ಪಿಸುವ ಮಾಸಪತ್ರವನ್ನು ಓದುವ ಕೆಲಸವನ್ನು ಬಾಲಿಕೆಯಾಗಿದ್ದು, ಇವರಿಗೆ ಒಪ್ಪಿಸಲಾಗಿತ್ತು, ದೊಡ್ಡ ಸಭೆಯಲ್ಲಿ ನಿರುಪಮಾ ಗಾಂಧೀಜಿಯವರ ಸೂಚನೆಯಂತೆ ಈ ಮಾನಪತ್ರದ ಮೊದಲ ಹಾಗೂ ಕೊನೆಯ ಪ್ಯಾರವನ್ನು ಓದಿದಳು. ಆಗ ಅವರ ಕೈಯಲ್ಲಿದ್ದ ಚಿನ್ನದ ಬಳೆ ಮತ್ತು ಹಾರವನ್ನು ಗಾಂಧೀಜಿಯವರು ಕೇಳಿದಾಗ ಆಕೆ ತಕ್ಷಣ ಕೊಟ್ಟಿದ್ದಳು. ನಂತರ ಅವರು ಆಭರಣಗಳನ್ನು ತೊಡಲಿಲ್ಲ. ಕೊಡುವಾಗ ಇನ್ನು ಮುಂದೆ ಚಿನ್ನದ "ಆಭರಣ ತೊಡುವುದಿಲ್ಲ". ಎಂದು ಭಾಷೆ ಹಾಕಿಸಿಕೊಂಡರು ಮುಂದೆ ಅವರು ಕಿವಿಯ ಆಭರಣ ಹೊರತಾಗಿ ಇತರ ಯಾವುದೇ ಆಭರಣವನ್ನು ಧರಿಸಲಿಲ್ಲ. (೨೧)

ನಿರುಪಮಾ ನಾಯಕ್ ಅವರು ವೃತ್ತಿಯಲ್ಲಿ ವೈದ್ಯರಾಗಿ ಕಾರ್ಯನಿರ್ವಹಿಸಿ ಇಂದು ಬೆಂಗಳೂರಿನ ಎಲ್ಡರ್ ಹೋಮ್ ನಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ.

ನಿರುಪಮಾರಂತೆ ಇತರ ಮಹಿಳೆಯರು ಆಭರಣ ತ್ಯಾಗಗಳನ್ನು ಮಾಡಿದ ಬಗ್ಗೆ ಮೌಖಿಕ ಹೇಳಿಕೆಗಳು ದೊರೆಯುತ್ತಿದೆ. ಆದರೆ ದಾಖಲಿಸಲ್ಪಟ್ಟ ವಿವರಗಳಿಲ್ಲ.

**ಉ) ಸಾಮಾನ್ಯ ಮಹಿಳೆಯರ ಪಾತ್ರ:**

ಸ್ವಾತಂತ್ರ್ಯ ಹೋರಾಟದ ಮುಂದಾಳುಗಳಾಗಿ ಶಿಕ್ಷಿತ ಮಹಿಳೆಯರೇ ಭಾಗವಹಿಸಿದ್ದಾರೆ. ಆದರೆ ಉಪ್ಪಿನ ಸತ್ಯಾಗ್ರಹದಲ್ಲಿ ಕೆಲವು ಮೊಗವೀರ ಮಹಿಳೆಯರು ವಿಶೇಷವಾಗಿ ಪಾಲ್ಗೊಂಡಿದ್ದರು. ಅದು ಎಷ್ಟು ಪರಿಣಾಮಕಾರಿ ಆಗಿತ್ತೆಂದರೆ ಪೋಲೀಸರಿಗೆ ಅವರಿಂದ ಉಪ್ಪನ್ನು ಕಸಿದುಕೊಳ್ಳುವುದು ಸಾಧ್ಯವಾಗಲಿಲ್ಲ. ಇನ್ನು ಪಿಕೆಟಿಂಗ್ ಕಾರ್ಯಗಳಲ್ಲಿ ಮಹಿಳೆಯರು, ವಿದ್ಯಾರ್ಥಿನಿಯರು ಭಾಗವಹಿಸಿದ್ದರು. ವಿದೇಶಿ ವಸ್ತ್ರಗಳನ್ನು ಸುಡುವುದು, ಮದ್ಯದಂಗಡಿಗಳನ್ನು ಮುಚ್ಚಿಸುವುದು ಮತ್ತು ವಿದೇಶಿ ವಸ್ತುಗಳನ್ನು ಮಾರುವ ಅಂಗಡಿಗಳನ್ನು ಧಾಳಿ ಮಾಡುವ ಕಾರ್ಯಗಳಲ್ಲಿ ಮಹಿಳೆಯರೂ ತೊಡಗಿದ್ದರು. ಮನೆಯ ಒಳಗೆ ಬಂಧಿಯಾಗಿದ್ದ ಸ್ತ್ರೀಯರಲ್ಲಿ ರಾಷ್ಟ್ರೀಯತೆ ಅರಿವು ಮೂಡಿಸುವಲ್ಲಿ ಆಧುನಿಕ ಶಿಕ್ಷಣ ಮತ್ತು ಸ್ತ್ರೀ ವಿಮೋಚನಾ ಚಳುವಳಿಗಳು ಸಹಾಯ ಕಾರಿಯಾಗಿವೆ. ಬೆರಳೆಣಿಕೆಯಷ್ಟಾದರೂ ಸ್ತ್ರೀಯರು ಸ್ವಾತಂತ್ರ್ಯ ಹೋರಾಟದ ಮುಂದಾಳತ್ವವನ್ನು ವಹಿಸಿರುವುದು ಸ್ತುತ್ಯಾರ್ಹವೇ. ಆದರೆ ಸಾಮನ್ಯ ಮಹಿಳೆಯರು ಯಾವುದೇ ಪ್ರಚಾರದ ಆಸೆಯಿಲ್ಲದೆ ಮನೆಯೊಳಗಿದ್ದು ಕೊಂಡೇ ಪುರುಷ ಸ್ವಾತಂತ್ರ್ಯ ಹೋರಾಟಗಾರರಿಗೆ ಬೆಂಬಲ ನೀಡಿ ಸಹಕರಿಸಿದ್ದು ಮತ್ತು ಆಭರಣ ತ್ಯಾಗ, ವಿದೇಶಿ ವಸ್ತುಗಳ ತ್ಯಾಗಗಳ ಕಾರ್ಯಗಳನ್ನು ಮಾಡಿದ್ದು ಪ್ರಶಂಸನೀಯ.

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಮನೆಯ ಗಂಡಸರು ಜೈಲು ಸೇರಿದಾಗ ಮನೆಯ ಮಹಿಳೆಯರು ಸಂಪೂರ್ಣ ಜವಬ್ದಾರಿಗಳನ್ನು ನಿರ್ವಹಿಸಬೇಕಾಗಿತ್ತು. ಆರ್ಥಿಕ ಬಿಕ್ಕಟ್ಟುಗಳನ್ನು ಅವರು ಎದುರಿಸಬೇಕಾಗಿತ್ತು. ಆದರೆ ದೇಶಕ್ಕಾಗಿ ಮಾಡುವ ತ್ಯಾಗ ಮತ್ತು ಹೋರಾಟ ಎಂದೇ ಇದನ್ನು ಪರಿಗಣಿಸಿದ ಮಹಿಳೆಯರಲ್ಲಿ ನಮ್ಮಲ್ಲಿ ಅನೇಕರಿರಬಹುದು. ಅಂತಹದವರೆಲ್ಲರ ಅನುಭವಗಳು ನಮಗೆ ದೊರೆಯುವುದು ಸಾಧ್ಯವಿಲ್ಲ. ಆದರೂ ಇಂತಹ ಒಂದು ಕುಟುಂಬದ ಅನುಭವಗಳನ್ನು ಸಂಗ್ರಹಿಸುವ ಪ್ರಯತ್ನ ಮಾಡಲಾಗಿದೆ.

**ಊ) ಸ್ವಾತಂತ್ರ್ಯ ಹೋರಾಟಗಾರರೊಬ್ಬರ ಪತ್ನಿಯ ಅನಿಸಿಕೆಗಳು**

ಶ್ರೀಮತಿ ಸರಸ್ವತಿ ಎಸ್.ಎಂ ಭಟ್ ರವರು ದಿ॥ ಸೌರ್ಕುಡೇಲು ಮಹಬಲೇಶ್ವರ ಭಟ್ಟರ ಪತ್ನಿ. ಮಹಬಲೇಶ್ವರ ಭಟ್ಟರು ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಕೇಂದ್ರ ಸರಕಾರದಿಂದ ತಾಮ್ರ ಪತ್ರ ಪ್ರಶಸ್ತಿ ಪಡೆದುಕೊಂಡವರು. ಸಂತ ಎಲೋಸಿಯಸ್ ಕಾಲೇಜಿನಲ್ಲಿ ಇಂಟರ್ ಮೀಡಿಯೆಟ್ ವ್ಯಾಸಂಗ ಮಾಡುತ್ತಿದ್ದಾಗ ಇವರು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿ ಬಳ್ಳಾರಿ ಜೈಲು ಸೇರಿದ್ದರು. ಅವರು ಜೈಲಿನಿಂದ ಹಿಂದಿರುಗಿ

ಬಂದಾಗ ಅವರಿಗೆ ಪದವಿ ತರಗತಿಗೆ ದೇಶದ್ರೋಹದ ಬಿರುದು ನೀಡಿ ಪ್ರವೇಶ ನಿರಾಕರಿಸಲಾಯಿತು ಎಂದು ಶ್ರೀಮತಿ ಭಟ್ ನೊಂದು ನುಡಿಯುತ್ತಾರೆ. (೨೨)

ಖಾದಿ ವಸ್ತ್ರ ಧರಿಸಿ ಎಂದೂ ತಾಳ್ಮೆ, ಸಂಯಮ ಕಳೆದುಕೊಳ್ಳದ ಅವರ ತಮಗೆ ಹಾಗು ಮಕ್ಕಳಿಗೆ ಸದಾ ಆದರ್ಶವಾಗಿದ್ದರು ಎಂದು ಶ್ರೀಮತಿ ಭಟ್ ಅವರು ಹೇಳುತ್ತಾರೆ. ಅವರ ಚಟುವಟಿಕೆಗಳು ತಮಗೆ ಸ್ಫೂರ್ತಿ ನೀಡಿವೆ. ನಾನು ಕೂಡ ಸಮಾಜಸೇವಾ ಚಟುವಟಿಕೆಗಳಲ್ಲಿ ಭಾಗವಹಿಸಿದ್ದೇನೆ. ಅದೂ ಕೂಡ ಮದ್ಯಪಾನ ವಿರೋಧಿ ಕಾರ್ಯಕ್ರಮ, ಮಹಿಳಾ ಸಂಘಟನೆ, ಹಿಂದುಳಿದ ವರ್ಗಗಳ ಅಭಿವೃದ್ಧಿ ಇತ್ಯಾದಿ. ಇದಕ್ಕೆಲ್ಲಕ್ಕೂ ಭಟ್ಟರ ಸ್ವಾತಂತ್ರ್ಯ ಹೋರಾಟವೇ ಸ್ಫೂರ್ತಿ ಎನ್ನುತ್ತಾರೆ ಶ್ರೀಮತಿ ಸರಸ್ವತಿ ಭಟ್. (೨೩)

ಸ್ವಾತಂತ್ರ್ಯ ಹೋರಾಟದಲ್ಲಿ ನೇರಪಾಲ್ಗೊಳದ ಇಂತಹ ಮಹಿಳೆಯರು ನಮ್ಮ ಸುತ್ತ ಮುತ್ತಲೂ ಇರಬಹುದು. ಕೌಟುಂಬಿಕ ಚಟುವಟಿಕೆಗಳಿಗೆ ಸೀಮಿತವಾಗಿದ್ದ ಮಹಿಳೆಯರ ಬದುಕು ಅವರು ಅವಲಂಬಿಸಿದ ಪುರುಷರ ಪ್ರಭಾವದಿಂದಾಗ ಸುಧಾರಣಾ ತಿರುವು ಪಡೆದು ಕೊಂಡಿತು.

**ಅಡಿ ಟಿಪ್ಪಣಿ:**

| | | |
|---|---|---|
| ೧) ಡಾ॥ ಸರೋಜಿನಿ ಶಿಂತ್ರಿ | – | ಭಾರತ ಸ್ವಾತಂತ್ರ್ಯಹೋರಾಟದಲ್ಲಿ ಕರ್ನಾಟಕ ಮಹಿಳೆಯರ ಪಾತ್ರ, ಪುಟ ಸಂಖ್ಯೆ ೮ |
| ೨) – ಅದೇ – | – | –ಅದೇ– |
| ೩) ಮನೋಹರ ಪ್ರಸಾದ್ | – | ಉದಯವಾಣಿ ವಿಶೇಷ ಪುರವಣಿ – 'ತಿರಂಗ ಸಂಭ್ರಮ' ಪು.ಸಂ. ೧ |
| ೪) ಕೆ. ಅಭಿಶಂಕರ್ | – | ಕರ್ನಾಟಕ ಗಝೆಟಿಯರ್ – ಸೌತ್ ಕೆನರಾ – ಪು.ಸ ೭೦ |
| ೫) ಮಟಪಾಡಿ ಕುಮಾರಸ್ವಾಮಿ | – | ಉದಯವಾಣಿ ವಿಶೇಷ ಪುರವಣಿ, ತಾ:೧೫.೮.೨೦೦೮– ಪು.ಸ.೩ |
| ೬) – ಅದೇ – | – | –ಅದೇ– |
| ೭) ಸೂರ್ಯನಾಥ ಕಾಮತ್ | – | ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು – ಪು.ಸ.೨೧೯ |
| ೮) ಮಟಪಾಡಿ ಕುಮಾರಸ್ವಾಮಿ | – | ಉದಯವಾಣಿ ವಿಶೇಷ ಪುರವಣಿ – ತಾ.೧೭.೮.೨೦೦೮ – ಪು.ಸಂ,೩ |

| | | |
|---|---|---|
| ೯) – ಅದೇ – | – | –ಅದೇ– |
| ೧೦) ಸೂರ್ಯನಾಥ ಕಾಮತ್ | – | ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು – ಪು.ಸ.೨೧೭ |
| ೧೧) –ಅದೇ– | – | –ಅದೇ– ಪು.ಸ.೨೧೮ |
| ೧೨) –ಅದೇ– | – | –ಅದೇ–ಪು.ಸ.೨೨೩ |
| ೧೩) ಡಾ॥ ಸರೋಜಿನಿ ಶಿಂತ್ರಿ | – | ವಿಮೆನ್ ಫ್ರೀಡಂ ಫೈಟರ್ಸ್ ಇನ್ ಕರ್ನಾಟಕ– ಪು.ಸ.೩೨ |
| ೧೪) ಡಾ॥ ಸರೋಜಿನಿ ಶಿಂತ್ರಿ | – | ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ಮಹಿಳೆಯರ ಪಾತ್ರ – ಪು.ಸ.೧೦ |
| ೧೫) –ಅದೇ– | – | –ಅದೇ– ಪು.ಸ೧೧ |
| ೧೬) –ಅದೇ– | – | –ಅದೇ– ಪು.ಸ.೧೨ |
| ೧೭) –ಅದೇ– | – | –ಅದೇ–ಪು.ಸ.೧೩ |
| ೧೮) –ಅದೇ– | – | –ಅದೇ–ಪು.ಸ ೧೭ |
| ೧೯)–ಅದೇ– | – | –ಅದೇ–ಪು.ಸ.೧೮ |
| ೨೦) ಕ್ರಾಂತಿಫೆರೆಯಾಸ್ | – | ಕ್ರಿಶ್ಚನ್ ಇಂಪ್ಯಾಂಕ್ಟ್ ಇನ್ ಸೌತ್ ಕೆನರಾ ಪು.ಸ.೨೪೦ |
| ೨೨) ಬಿ.ವಿ.ಕಕ್ಕಿಲಾಯ | – | ಸವರ್ಕುಡೇಲು  ಮಹಾಬಲೇಶ್ವರ ಭಟ್– ಬದುಕು ಮತ್ತು ಸಾಧನೆ – ಪು.ಸ. ೩೨. |
| ೨೩) ವೈಯಕ್ತಿಕ ಸಂದರ್ಶನ | – | ಸರಸ್ವತಿ ಎಸ್.ಎಂ. ಭಟ್ – ತಾ: ೪.೧೦.೨೦೦೮ ಮೌಖಿಕ ಹೇಳಿಕೆ. |

<u>ಆಕರಸೂಚಿ</u>

## I ಮೂಲದಾಖಲೆಗಳು:

೧) **ಬಾಸೆಲ್ ಮಿಶನ್ ವರದಿಗಳು** – ೧೮೫೮, ೧೮೫೯, ೧೮೮೫, ೧೮೮೯, ೧೯೦೦

೨) ಮೆಮೊರೆಂಡಮ್ ಆಫ್ ಮಹಿಳಾ ಸಭಾ– ತಾ: ೧೦.೧೨.೧೯೨೮

೩) ಬ್ರಹ್ಮ ಸಮಾಜ ಪ್ರಕಟಣೆ – ಒರಿಜಿನ್ ಆಫ್ ಬ್ರಹ್ಮ ಸಮಾಜ್ ಇನ್ ಮಂಗಳೂರು, ೧೯೭೦

೪) ಸಿಸ್ಟರ್ ಹೆಡ್‌ವಿಜ್ – ಕಾಂಟ್ರಿಬ್ಯೂಷನ್ ಆಫ್ ದಿ ಅಪೊಸ್ಟೋಲಿಕ್ ಕಾರ್ಮೆಲ್ ಟು ಎಜುಕೇಶನ್ ಇನ್ ಸೌತ್ ಕೆನರಾ, ೧೯೭೧.

೫) ಬೆಸೆಂಟ್ ವಿದ್ಯಾಸಂಸ್ಥೆಯ ವರದಿ – ೨೦೦೭

## II ಪರಾಮರ್ಶನ ಗ್ರಂಥಗಳು:

೧) ಜೆರಾಲ್ಡಿನ್ ಫೋರ್ಬ್ – ಆಧುನಿಕ ಭಾರತದಲ್ಲಿ ಮಹಿಳೆ – ಇಂಗ್ಲೀಷ್ ಮೂಲ

೨) ಹೆಚ್.ಎಸ್. ಪಾರ್ವತಿ – ಕನ್ನಡಕ್ಕೆ ಪ್ರ. ಹಂಪಿ ಕನ್ನಡ ವಿಶ್ವವಿದ್ಯಾನಿಲಯ –೨೦೦೧

೩) ಜಾನ್ ಸ್ಟರಕ್ – ಸೌತ್ ಕೆನರಾ ಮ್ಯಾನ್ಯುಯಲ್–೧೮೯೪ ಕರ್ನಾಟಕ ಸರ್ಕಾರದ ಮರುಪ್ರಕಟಣೆ ೨೦೦೩

೪) ಸ್ಯಾಮ್ಯುಯಲ್ ಮಿಲೆ – ಕೆನರಾ ಪಾಸ್ಟ್ ಅಂಡ್ ಪ್ರೆಸೆಂಟ್, ೧೮೮೭ – ಪ್ರಕಾಶಕರು – ಬಾಸೆಲ್ ಮಿಶನ್ ಸೊಸೈಟಿ

೫) ಕೆ. ಅಭಿಶಂಕರ್ – ಕರ್ನಾಟಕ ಗಝೆಟಿಯರ್ – ಸೌತ್ ಕೆನರಾ–೧೯೭೩

೬) ಸೂರ್ಯನಾಥ ಕಾಮತ್ – ಸ್ವಾಂತತ್ರ್ಯ ಸಂಗ್ರಾಮದ ಸ್ಮೃತಿಗಳು – ೧೯೯೮ – ಪ್ರಕಾಶಕರು ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ.

೭) ಡಾ॥ ಸರೋಜಿನಿ ಶಿಂತ್ರಿ – ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ಮಹಿಳೆಯರ ಪಾತ್ರ – ಪ್ರಕಾಶಕರು – ಪ್ರಸಾರ ಕರ್ನಾಟಕ ವಿಶ್ವವಿದ್ಯಾನಿಲಯ – ಧಾರವಾಡ

೮) ರೆವೆರೆಂಟ್ ಡಾ|| ವಿಜಯ ಕುಮಾರ – ಕರ್ನಾಟಕದಲ್ಲಿ ಪ್ರೊತೆಸ್ತಾಂತ ಮಿಶನ್ನುಗಳ ಚರಿತ್ರೆ. ೨೦೦೪ – ಪ್ರಕಾಶಕರು – ಕನ್ನಡ ದೈವಜ್ಞಾನ ಸಮಿತಿ– ಮಂಗಳೂರು

೯) ಡಾ|| ಎ.ವಿ. ನಾವಡ ಮತ್ತು ಇತರರು – ತುಳುಸಾಹಿತ್ಯ ಚರಿತ್ರೆ – ೨೦೦೭– ಪ್ರಕಾಶಕರು – ಕನ್ನಡ ವಿಶ್ವವಿದ್ಯಾನಿಲಯ

೧೦) ಗಣಪತಿ ರಾವ್ ಐಗಳ್ ಎಂ. – ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ – ದ್ವಿತೀಯ ಮುದ್ರಣ – ೨೦೦೪ – ಪ್ರಕಾಶಕರು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ – ಉಡುಪಿ

೧೧) ಕೇಶವ ಕುಡ್ವ – ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ (ಮಂಗಳೂರು) ಕಿಲ್ಲೆ.ಎನ್. ಶೀನಪ್ಪ ಹೆಗ್ಡೆ – ೧೯೫೪ ಪ್ರಾಚೀನ ತುಳುನಾಡು – ಮಂಗಳೂರು – ೧೯೫೪

೧೨) ಡಾ|| ವಸಂತ ಮಾಧವ ಕೆ.ಜಿ – ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಮತ್ತು ಸಂಶೋಧನೆ

೧೩) ಬಿ.ವಿ. ಕಕ್ಕಿಲಾಯ – ಶ್ರೀಮಂತ ಮನಸ್ಸಿನ ಧೀಮಂತ ವ್ಯಕ್ತಿ – ಸವರ್ಕುಡೇಲು ಮಹಾಬಲೇಶ್ವರ ಭಟ್ – ಬದುಕು ಮತ್ತು ಸಾಧನೆ – ೨೦೦೫ – ಪ್ರಕಾಶಕರು – ಸಮದರ್ಶಿ ವೇದಿಕೆ – ನವಭಾರತ ವೃತ್ತ ವೇದಿಕೆ ಮಂಗಳೂರು

೧೪) ಡಾ|| ಗುರುರಾಜ್ ಭಟ್ – ಸ್ಟಡೀಸ್ ಇನ್ ತುಳುವಾ ಇಸ್ಟರಿ ಅಂಡ ಕಲ್ಚರ್ ೧೯೭೪–ಪ್ರಕಾಶಕರು–ಡಾ|| ಗುರುರಾಜಭಟ್.

೧೫) ಡಾ|| ಪೀಟರ್ ವಿಲ್ಸನ್ ಪ್ರಭಾಕರನ್ – ಬಾಸೆಲ್ ಮಿಶನ್ ಇನ್ ಸೌತ್ ಕೆನರಾ–೧೯೮೭ ಸಂಶೋಧನಾ ಪ್ರಬಂಧ

೧೬) ಪದ್ಮಶ್ರೀ – ಎಜುಕೇಶನ್ ಫ್ರಂ ಬಾಸೆಲ್ ಮಿಶನ್– ಸಂಶೋಧನಾ ಪ್ರಬಂಧ

## III ನಿಯತಕಾಲಿಕಗಳು ಮತ್ತು ಪತ್ರಿಕೆಗಳು

೧) ಮುಕ್ತಿ ಮಿಶನ್ – ಮುಕ್ತಿ ಕಿರಣ್ ಸ್ಪೆಷಲ್ ಅಡಿಶನ್ – ಜೋಶ್‌ವಾ ಎಂಟರ್ ಪ್ರೈಸಸ್ – ೨೦೦೮

೨) ಉದಯವಾಣಿ ವಿಶೇಷ ಪುರವಣಿ – ೧೭.೮.೨೦೦೮

೩) ಸುಭೋದಿನಿ ವೃತ್ತ ಪತ್ರಿಕೆ – ೧೫.೭.೧೮೭೧

## IV ವೈಯಕ್ತಿಕ ಸಂದರ್ಶನಗಳು

೧) ಜಯರಾಂ ಸೇನವ – ಬಂಟ ಸಮುದಾಯದ ಹಿರಿಯ ವ್ಯಕ್ತಿ ಅಂಡಾಲಬೀಡು – ಮರಕಡ – ಮಂಗಳೂರು ತಾ: ೧೫.೮.೨೦೦೮

೨) ಶ್ರೀಮತಿ ರೇಣುಕಾ – ಮರಾಠಿ ನಾಯ್ಕ್ ಜಾತಿಯ ಕಿರಿಯ ಮಹಿಳೆ – ಪುತ್ತೂರು – ತಾ: ೧೫.೮.೨೦೦೮

೩) ಕೆ. ಲೋಕಾನಂದ – ಕಾರ್ಯದರ್ಶಿ – ಆರ್ಯ ಸಮಾಜ – ಮಂಗಳೂರು – ತಾ: ೨೫.೮.೨೦೦೮

೪) ಭವಾನಿ ಶಂಕರ್ – ಆರ್ಯ ಸಮಾಜದ ಸದಸ್ಯರು – ತಾ:೨೫.೮.೨೦೦೮

೫) ಶ್ರೀಮತಿ ಸರಸ್ವತಿ ಎಸ್.ಎಂ. ಭಟ್ – ಶ್ರೀ ಎಸ್. ಮಹಾಬಲೇಶ್ವರ ಭಟ್ಟರ ಪತಿ – ಸವರ್ಕುಡೇಲು – ಮುಡಿಪು – ತಾ:೪.೧೦.೨೦೦೮

೬) ಶ್ರೀಮತಿ ಸುಮತಿ ಪಾಂಗಳ – ಉಪಾಧಕ್ಷರು – ಮಹಿಳಾ ಸಭಾ – ಮಂಗಳೂರು ತಾ: ೪.೧೦.೨೦೦೮

## ಅಧ್ಯಾಯ – ೭

# ಉಪಸಂಹಾರ

ಮಹಿಳಾ ಸುಧಾರಣಾ ಕಾರ್ಯಗಳು ಹತ್ತೊಂಭತ್ತನೇ ಶತಮಾನದಿಂದಷ್ಟೇ ನಮ್ಮ ದೇಶದಲ್ಲಿ ಪ್ರಾರಂಭವಾಯಿತು. ಪ್ರಾಚೀನ ಭಾರತದಲ್ಲಿ ಮಹಿಳೆಯರ ಸ್ಥಿತಿಗತಿಗಳು ಉತ್ತಮವಾಗಿದ್ದಿರಬಹುದಾದರೂ ಸಾಕಷ್ಟು ದೀರ್ಘಕಾಲದಿಂದ ಅದು ದುಸ್ಥಿತಿಗಿಳಿಯುತ್ತಾ ಬಂತು. ವಸಾಹತು ಶಾಹಿ ಆಡಳಿತ ಪ್ರಾರಂಭವಾಗುವ ಹೊತ್ತಿಗೆ ಮಹಿಳೆಯರು ತೀರಾ ನಿಕೃಷ್ಟ ಸ್ಥಾನಕ್ಕಿಳಿಸಲ್ಪಟ್ಟಿದ್ದರು. ಕೌಟುಂಬಿಕ ದೌರ್ಜನ್ಯಗಳಿಗೆ ಮಹಿಳೆಯರು ತಮ್ಮನ್ನು ತಾವು ಒಗ್ಗಿಸಿಕೊಡಿದ್ದರು. ಪುರುಷಾಧಿಪತ್ಯದ ಸಮಾಜದಲ್ಲಿ ತಮ್ಮ ಯಾವುದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುವ ಅವಕಾಶವನ್ನುವರು ಪಡೆದುಕೊಂಡಿರಲ್ಲಿಲ್ಲ. ಚಲನೆಯೇ ಇಲ್ಲದೇ ಕ್ಷೀಣವಾಗಿದ್ದ ಮಹಿಳೆಯರ ಸ್ಥಿತಿಗತಿಗಳು ತೀರಾ ಶೋಚನೀಯವಾಗಿದ್ದವು.

ಮಹಿಳಾ ಸುಧರಣಾ ಚಳುವಳಿಗಳು ನಮ್ಮ ದೇಶದ ರಾಷ್ಟ್ರೀಯ ಹೋರಾಟದ ಪ್ರಮುಖ ಭಾಗವಾಗಿತ್ತು. ಹದಿನೆಂಟನೇ ಶತಮಾನದಿಂದ ಇಪ್ಪತ್ತನೇ ಶತಮಾನದವರೆಗೆ ಮಹಿಳಾ ವಿಮೋಚನಾ ಚಳುವಳಿಗಳು ದೇಶದ ಎಲ್ಲೆಡೆ ನಡೆದಿವೆ. ಉತ್ತರ ಭಾರತದಲ್ಲಿ ಸತಿಯಂತಹ ಕ್ರೂರ ಪದ್ದತಿ, ಸ್ತ್ರಿ ಶಿಶುಹತ್ಯೆ, ಬಾಲ್ಯ ವಿವಾಹ, ವಿಧವಾ ವಿವಾಹ ನಿಷೇಧ, ಮುಂತಾದ ಪದ್ಧತಿಗಳು ಮಹಿಳೆಯರನ್ನು ಕತ್ತಲ ಪ್ರಪಂಚದೆಡೆಗೆ ನೂಕಿದ್ದವು. ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧ ಪಟ್ಟಂತೆ ಹೇಳುವುದಾದರೆ. ಮಹಿಳೆಯರನ್ನು ಕಂಗೆಡಿಸಿದ ಸಮಸ್ಯೆಗಳು ಮುಖ್ಯವಾಗಿ ಬಾಲ್ಯ ವಿವಾಹ, ಕೇಶಮುಂಡನ, ಬಹುಪತ್ನಿತ್ವ, ವಿದ್ಯಾಭ್ಯಾಸದ ನಿರಾಕರಣೆ ಇತ್ಯಾದಿ.

ವಸಾಹತುಶಾಹಿ ಆಡಳಿತದ ಲೋಪದೋಷಗಳು ಇತರ ವಿಷಯ ಸಂಬಂಧಪಟ್ಟಂತೆ ಏನಿದ್ದರೂ ಮಹಿಳಾ ವಿಮೋಚನೆಗೆ ಸಂಬಂಧಪಟ್ಟಂತೆ ಮಾತ್ರ ಧನಾತ್ಮಕ ಪರಿಣಾಮಗಳನ್ನೇ ಬೀರಿದೆ. ಮಹಿಳೆಯರನ್ನು ಕೌಟುಂಬಿಕ ಬಂಧನದಲ್ಲಿರಿಸುವ ಬರ್ಬರ ಸಂಸ್ಕೃತಿಯಿಂದ ಅವರನ್ನು ಹೊರತರಲು ಪಾಶ್ಚಾತ್ಯ ವಿದ್ಯಾಭ್ಯಾಸ ಖಂಡಿತವಾಗಿಯೂ ಉಪಯುಕ್ತವಾಗಿದೆ. ಇದರಿಂದಾಗಿ ಚಲನೆಯೇ ಇಲ್ಲದೆ ಕ್ಷೀಣವಾಗಿ ಹೋಗಿದ್ದ ಮಹಿಳೆಯರ ಸ್ಥಿತಿಗತಿಗಳು ನಿಧಾನವಾದ ಪಥದಲ್ಲಿ ಆಧುನಿಕತೆಯೆಡೆಗೆ ಚಲಿಸತೊಡಗಿದವು. ವಸಾಹತು ಸರಕಾರವೂ, ಭಾರತೀಯ ಸಮಾಜ ಸುಧಾರಕರೂ ಕೂಡಿಯೇ ಶತಮಾನಗಳಿಂದ ನಡೆದುಬಂದಿದ್ದ ವಂಚನೆ ಮತ್ತು ಅನ್ಯಾಯಗಳನ್ನು ಸರಿಪಡಿಸಿ ಸ್ತ್ರೀಯರ ಸ್ಥಾನಮಾನವನ್ನು ಸುಧಾರಿಸುವ ಕ್ರಮಗಳನ್ನು ಕೈಗೊಂಡರು ಸ್ತ್ರೀಯರಿಗೆ ಶಿಕ್ಷಣ ನೀಡಲೇಬೇಕೆಂಬ ಸತ್ಯವನ್ನು ಅರಿತುಕೊಂಡರು. ಧಾರ್ಮಿಕ ಕಟ್ಟುಪಾಡುಗಳಿಂದ ಅವರನ್ನು

ವಿಮೋಚನೆಗೊಳಿಸುವ ಕಾರ್ಯಗಳನ್ನು ಆರಂಭಿಕ ಹಂತಗಳಲ್ಲಿ ಪುರುಷರೇ ನಿರ್ವಹಿಸಿದರು. ಮಹಿಳೆಯರ ಪಾಲಿಗೆ ಇದುವೇ ಬೆಳಕಿನ ದೀಪವಾಯಿತು. ವಸಾಹತು ಅಡಳಿತ, ನವೀನ ತಂತ್ರಜ್ಞಾನ ಮತ್ತು ಪ್ರಗತಿಪರ ಆದರ್ಶಗಳು ಮಹಿಳೆಯರ ಸಮಸ್ಯೆಗಳಿಗೆ ಪರಿಹಾರವಂಬಂತೆ ಕಂಡು ಬಂದವು. ಮಹಿಳೆಯರಿಗೆ ತಾವು ಒಂದು ನಿಶ್ಚಿತ ಗುರಿಯೆಡೆಗೆ ಸಾಗಬೇಕೆಂಬ ತುಡಿತ ಪ್ರಾರಂಭವಾಯಿತು.

ದಕ್ಷಿಣ ಕನ್ನಡ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ ಮಹಿಳಾ ಪರ ಚಳುವಳಿ ಮತ್ತು ರಾಷ್ಟ್ರೀಯ ಹೋರಾಟ ಒಟ್ಟೊಟ್ಟಿಗೆ ಸಾಗಿವೆ. ಬುದ್ಧಿವಂತರ ಜಿಲ್ಲೆಯೆಂದೇ ಕರೆಸಿಕೊಂಡಿರುವ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮಹಿಳಾಪರ ಚಳುವಳಿಗಳಲ್ಲಿ ಅಗ್ರ ಸ್ಥಾನವನ್ನು ಪಡೆದುಕೊಂಡಿದೆ.

ಗಾಂಧೀ ಪೂರ್ವಯುಗದಲ್ಲಿಯೇ ಇಲ್ಲಿ ಮಹಿಳಾ ವಿಮೋಚನಾ ಕಾರ್ಯಗಳು ಆರಂಭಗೊಂಡಿದೆ. ಸತಿಯಂತಹ ಕ್ರೂರ ಪದ್ಧತಿ ಇಲ್ಲಿ ನಡೆಯಲಿಲ್ಲವಾದರೂ ಉನ್ನತ ವರ್ಗದ ವಿಧವೆಯರ ಪಾಡು ಅಸಹನೀಯವಾಗಿತ್ತು. ಬಾಲ್ಯದಲ್ಲಿಯೇ ವಿಧವೆಯಾದ ಸ್ತ್ರೀಯೊಬ್ಬಳು ಜೀವನದ ಯಾವ ಸುಖದ ಅನುಭವವಿಲ್ಲದಿದ್ದರೂ ರೂಢಿಗತ ಸಂಪ್ರದಾಯಗಳಿಂದಾಗಿ ತನ್ನಲ್ಲಿನ ಸೌಭಾಗ್ಯವನ್ನು ಕಳೆದುಕೊಳ್ಳಬೇಕಾಗಿತ್ತು. ತಾನಿರುವ ಕುಟುಂಬದ ಸದಸ್ಯರೆಲ್ಲರ ಚಾಕರಿಯೇ ಆಕೆಯ ಬದುಕಾಗಿತ್ತು. ಇಂತಹ ಬಂಧಿತ ವರ್ತುಲದಿಂದ ಸ್ತ್ರೀಯರನ್ನು ಹೊರತರುವ ಕಾರ್ಯಕ್ರಮಗಳು ಜಿಲ್ಲೆಯಲ್ಲಿ ಸ್ಥಾಪನೆಗೊಂಡ ಬ್ರಹ್ಮ ಸಮಾಜ, ಆರ್ಯ ಸಮಾಜ ಮತ್ತು ಥಿಯೋಸೋಫಿಕಲ್ ಸೊಸೈಟಿಗಳಿಂದ ನಡೆದಿವೆ. ಇಪ್ಪತ್ತನೇ ಶತಮಾನದ ಆರಂಭದ ಹೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯರು ಶಿಕ್ಷಣದತ್ತ ಅಕರ್ಷಿತರಾದರು. ಶಿಕ್ಷಿತ ಹುಡುಗಿಯೊಬ್ಬಳು ಒಳ್ಳೆಯ ತಾಯಿಯಾಗಬಲ್ಲಳು ಎಂಬ ಅಭಿಪ್ರಾಯ ರೂಪುಗೊಳ್ಳಲು ಪ್ರಾರಂಭವಾಯಿತು. ಸ್ತ್ರೀಯರ ಬಗೆಗಿದ್ದ ನಿರ್ಲಕ್ಷ್ಯ ಧೋರಣೆ ಕಡಿಮೆಯಾಗುತ್ತಾ ಬಂತು. ಕೇಶ ಮುಂಡನ ಕ್ರಮಕ್ಕೆ ತೀವ್ರ ವಿರೋಧ ವ್ಯಕ್ತವಾಯಿತು. ಬಾಲ್ಯ ವಿವಾಹಗಳು ಕಡಿಮೆಯಾಗುತ್ತಾ ಬಂದವು. ಕಾನೂನು ಕ್ರಮಗಳು ಬಾಲ್ಯವಿವಾಹದ ತಡೆಗೆ ಸಹಾಯ ಮಾಡಿದವು. ಜಿಲ್ಲೆಯಲ್ಲಿ ಸ್ಥಾಪನೆಗೊಂಡ ಸೈಂಟ್ ಅಗ್ನೆಸ್ ಕಾಲೇಜು ದಕ್ಷಿಣ ಭಾರತದ ಪ್ರಥಮ ಮಹಿಳಾ ಉನ್ನತ ಶಿಕ್ಷಣ ಸಂಸ್ಥೆ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಇದು ಮಹಿಳೆಯರನ್ನು ಬೌದ್ಧಿಕವಾಗಿ ಇನ್ನಷ್ಟು ಸಮರ್ಥರಾಗಿಸಲು ಅವಕಾಶವನ್ನು ಮಾಡಿಕೊಟ್ಟಿತು. ಉನ್ನತ ಶಿಕ್ಷಣ ಮಹಿಳೆಯರ ಮನೋಬಲವನ್ನು ಹೆಚ್ಚಿಸಲು ಸಹಾಯಕಾರಿ ಆಯಿತು.

ತಮಗಾಗುತ್ತಿರುವ ಅನ್ಯಾಯಗಳ ವಿರುದ್ಧ ಪ್ರತಿಭಟನಾ ಮನೋಭಾವವನ್ನು ಸ್ತ್ರೀಯರು ಪಡೆದುಕೊಂಡರು. ತಮ್ಮ ಹಕ್ಕುಗಳಿಗಾಗಿ ಹೋರಾಟ ಅನಿವಾರ್ಯ ಎಂಬ ಸತ್ಯವನ್ನು ಅರಿತುಕೊಂಡರು ಮಹಿಳಾ ಸಂಘ ಸಂಸ್ಥೆಗಳ ಉದಯವಾಯಿತು. ಶಿಕ್ಷಿತ ಮಧ್ಯಮ ವರ್ಗದ ಮಹಿಳೆಯರು ಇಂತಹ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆದರೆ ಇವರು ಆಧುನಿಕ ಪಾಶ್ಚಾತ್ಯ ಜೀವನ ಶೈಲಿಯನ್ನು ಅಳವಡಿಸಿಕೊಂಡಿದ್ದರು ಮತ್ತು ತಾವು ಅವಲಂಬಿಸಿದ ಪುರುಷರ ಪ್ರಭಾವದ ಮೇಲೆಯೇ ಕಾರ್ಯ ನಿರ್ವಹಿಸುತ್ತಿದ್ದರು. ಮೊದಲಿನಿಂದಲೂ ದುಡಿತವನ್ನು ಕಂಡುಕೊಂಡಿದ್ದ ಕೆಳವರ್ಗದ ಮಹಿಳೆಯರನ್ನು ಇಂತಹ ಚಟುವಟಿಕೆಗಳು ಆಕರ್ಷಿಸಲಿಲ್ಲ. ಬದುಕಿನ ಎಲ್ಲಾ ಕಷ್ಟಗಳನ್ನು ಸಹಜವೆಂಬಂತೆ ಸ್ವೀಕರಿಸಿದ್ದ ಅವರಿಗೆ ಆಧುನಿಕ ಬೆಳವಣಿಗೆಗಳು ಹೆಚ್ಚಿನ ಸಹಾಯವನ್ನು ಮಾಡಲಿಲ್ಲ. ಕೆಳವರ್ಗದ ಹೆಚ್ಚಿನ ಮಹಿಳೆಯರು ತಮ್ಮ ಕುಡುಕ ಗಂಡಂದಿರಿಂದ ದೌರ್ಜನ್ಯಕ್ಕೊಳಗಾಗುತ್ತಿದ್ದರು. ಮತ್ತು ಮೇಲ್ವರ್ಗದ ಪುರುಷರಿಂದಲೂ ಲೈಂಗಿಕ ದೌರ್ಜನ್ಯಕ್ಕೊಳಗಾಗುತ್ತಿದ್ದರು. ಆದರೂ ಅಂತಹ ಸ್ತ್ರೀಯರನ್ನು ಮತ್ತು ಅವರ ಮಕ್ಕಳನ್ನು ಕೆಳವರ್ಗದ ಜನರು ಜಾತಿಯಿಂದ ಬಹಿಷ್ಕರಿಸಲಿಲ್ಲ ಅವರನ್ನು ತಮ್ಮ ಜಾತಿಗೆ ಸೇರಿಸಿಕೊಂಡರು. ಇದರಿಂದಾಗಿ ಅಂತಹವರ ಸಾಮಾಜಿಕ ಜೀವನಕ್ಕೇನೂ ಧಕ್ಕೆಯಾಗಲಿಲ್ಲ. ಇದು ಅಶಿಕ್ಷಿತರಾದರೂ ಅವರ ವಿಶಾಲ ಮನೋಭಾವನೆಯನ್ನು ತೋರಿಸುತ್ತದೆ. ಅದೇ ಉನ್ನತ ವರ್ಗದ ಸ್ತ್ರೀಯೊಬ್ಬಳು ತನಗಿಂತ ಕೆಳವರ್ಗದ ಪುರುಷನೊಂದಿಗೆ ವಿವಾಹ ಮಾಡಿಕೊಂಡರೆ ಅವಳನ್ನು ಉನ್ನತ ಜಾತಿಗಳು ಬಹಿಷ್ಕರಿಸುತ್ತಿದ್ದರು. ಇಂತಹ ಸಮಸ್ಯೆಗಳನ್ನು ನಿವಾರಿಸಲು ಕುದ್ಮಲ್‌ರಂಗರಾವ್‌ರಂತಹವರು ಪ್ರಯತ್ನಿಸಿದ್ದಾರೆ.

ರಾಜಕೀಯ ವೇದಿಕೆಯೂ ಮಹಿಳೆಯರ ಸಂಘಟನಾ ಸಾಮರ್ಥ್ಯಕ್ಕೆ ಬೆಂಬಲವನ್ನು ನೀಡಿತು. ರಾಜಕೀಯ ಚಳುವಳಿಗಳಲ್ಲಿ ನಾಯಕತ್ವ ವಹಿಸುವ ಮಟ್ಟಕ್ಕೆ ಅವರು ಬೆಳೆದರು. ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಧೈರ್ಯವಾಗಿ ಪುರುಷರೊಡನೆ ಸಮಾನವಾಗಿ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದುದ್ದನ್ನು ಮಂಗಳೂರಿನ ಜನ ಈಗಲೂ ಸ್ಮರಿಸುತ್ತಾರೆ. ಅವರ ರಾಷ್ಟ್ರೀಯ ಹೋರಾಟದ ನಾಯಕತ್ವ ಮತ್ತು ಅವರು ಸಾರ್ವಜನಿಕ ಸಭೆಗಳಲ್ಲಿ ಭಾಗವಹಿಸುತ್ತಿದ್ದುದು ಸಾಮಾನ್ಯ ಮಹಿಳೆಯರಿಗೆ ಪ್ರೇರಣೆಯಾಗಿತ್ತು ಎನ್ನುತ್ತಾರೆ ಮಂಗಳೂರಿನ ಮಹಿಳೆಯರು. ಇನ್ನೂ ಇಂತಹ ಅನೇಕ ಉತ್ತಮ ಬೆಳವಣಿಗೆಗಳಾದುವು.

ದೇಶದ ಇತರ ಯಾವುದೇ ಭಾಗಗಳಿಗಿಂತ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೇ ಮಹಿಳಾ ವಿಮೋಚನಾ ಕಾರ್ಯ ಹೆಚ್ಚಾಗಿ ನಡೆದಿದೆ. ಈ ಜಿಲ್ಲೆಯಲ್ಲಿ ಹುಟ್ಟಿದ ಕೆಲ ಮಹಿಳೆಯರು ವಸಾಹತುಶಾಹಿ ಆಡಳಿತ ಕಾಲದಲ್ಲಿ ಮಾಡಿದ ಸಾಧನೆ ಅದ್ಭುತವಾದದ್ದೇ. ಉದಾಹರಣೆಗೆ –

ಕಮಲಾದೇವಿ ಚಟ್ಟೋಪಾಧ್ಯಾಯ ಮತ್ತು ಪಂಡಿತಾ ರಮಾಬಾಯಿ ಇವರು ಅಖಿಲ ಭಾರತ ಮಟ್ಟದಲ್ಲಿ ಖ್ಯಾತಿಯನ್ನು ಗಳಿಸಿದ್ದರು.

೧೯೪೭ ರ ನಂತರ ಅಂದರೆ ಸ್ವಾತಂತ್ರ್ಯಾನಂತರ ಮಹಿಳೆಯರ ಸ್ಥಾನಮಾನದಲ್ಲಿ ಇನ್ನೂ ಅನೇಕ ಉತ್ತಮ ಬೆಳೆವಣಿಗೆಗಳಾಗಿವೆ. ಸ್ವತಂತ್ರ್ಯ ಸರ್ಕಾರ ಈ ದಿಶೆಯಲ್ಲಿ ಮಹಿಳೆಯರಿಗೆ ನೀಡಿದ ಪ್ರಮುಖ ಕೊಡುಗೆ ಮತದಾನದ ಹಕ್ಕು. ಸ್ವತಂತ್ರ್ಯ ಭಾರತದ ಸಂವಿಧಾನದ ಮಹಿಳೆಯರಿಗೆ ಈ ಹಕ್ಕನ್ನು ನೀಡಿತು.

ಇಪ್ಪತ್ತೊಂದನೆಯ ಶತಮಾನದ ಮಹಿಳೆಯರಾದ ನಾವಿಂದು ಮುಕ್ತವಾಗಿ ಎಲ್ಲಾ ರಂಗಗಳಲ್ಲಿಯೂ ಕಾರ್ಯ ನಿರ್ವಹಿಸಲು ಅವಕಾಶಗಳಿವೆ. ನಮ್ಮಿಷ್ಟದಂತೆ ಬದುಕುವ ಸ್ವಾತಂತ್ರ್ಯವನ್ನು ಬಹುಮಟ್ಟಿಗೆ ಪಡೆದುಕೊಡಿದ್ದೇವೆ. ಎರಡು ಶತಮಾನಗಳ ಹಿಂದೆ ನಮ್ಮ ಸ್ತ್ರೀಯರು ಮನೆಕೆಲಸ ಮಾಡುವ ಮತ್ತು ಮಕ್ಕಳನ್ನು ಹೆರುವ ಯಂತ್ರಗಳಷ್ಟೆ ಆಗಿದ್ದರು ಎಂಬುದನ್ನು ನೆನೆಸಿಕೊಳ್ಳಬೇಕು. ಮಕ್ಕಳ ತಾಯಿಯಾಗುವುದು ಮತ್ತು ಅವರನ್ನು ಪೋಷಿಸುವುದು ಸ್ತ್ರೀಯರಿಗೆ ಪಕೃತಿ ನೀಡಿದ ಜವಾಬ್ದಾರಿ. ಇದನ್ನು ನಿಭಾಯಿಸಲು ಆಧುನಿಕತೆ ಸಹಾಯವಾಗಿರಬೇಕೇ ಹೊರತು, ಆಧುನಿಕತೆಯ ಹೆಸರಿನಲ್ಲಿ ಸ್ವಚ್ಛಂದತೆ ಖಂಡಿತಾ ಸಲ್ಲದು.

ಹೆಣ್ಣು ಭ್ರೂಣಹತ್ಯೆ ಇಂದು ನಮ್ಮ ದೇಶವನ್ನು ಕಾಡುತ್ತಿರುವ ಒಂದು ದೊಡ್ಡ ಸಮಸ್ಯೆ. ಗಂಡು ಹೆಂಡಿರ ಅನುಪಾತದಲ್ಲಿ ಏರು ಪೇರಾದರೆ ಕಳವಳಕಾರಿ ಪರಿಸ್ಥಿತಿ ಎದುರಿಸಬೇಕಾಗುತ್ತದೆ. ಇದುವರೆಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ತ್ರೀಯರ ಸಂಖ್ಯೆ ಹೆಚ್ಚಿದ್ದರೂ ಇತ್ತೀಚೆಗೆ ಕಡಿಮೆಯಾಗುತ್ತಿದೆ ಎಂದು ಕೇಳಿಬರುತ್ತದೆ. ಆದರೂ ಇತರ ಜಿಲ್ಲೆಗೆ ಹೋಲಿಸಿದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಣ್ಣುಮಕ್ಕಳ ಬಗ್ಗೆ ಅಲಕ್ಷ್ಯ ಧೋರಣೆ ಕಡಿಮೆಯೇ. ಇಂದಿಗೂ ಇಲ್ಲಿಯ ಜನ ಮಹಿಳೆಯರ ಸರ್ವಾಂಗೀಣ ಪ್ರಗತಿಯನ್ನು ಉತ್ತೇಜಿಸುತ್ತಾರೆ. ಆದರೆ ಕರ್ನಾಟಕದ ಇತರ ಕೆಲವು ಜಿಲ್ಲೆಗಳಲ್ಲಿ ಹೆಣ್ಣುಮಕ್ಕಳ ಮೇಲಿರುವ ಅಲಕ್ಷ್ಯ ಧೋರಣೆ ಇನ್ನೂ ಬದಲಾಗಿಲ್ಲ. ಹೆಣ್ಣು ಭ್ರೂಣ ಹತ್ಯೆ ನಡೆಯುತ್ತಲೇ ಇದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ವಿಮೋಚನೆಗೆ ಜನ ಸ್ಪಂದಿಸಿದಂತೆ ಇತರ ಜಿಲ್ಲೆಯಲ್ಲಿಯೂ ಸ್ತ್ರೀಯರು ವಿಮೋಚನೆಗೆ ಪ್ರಯತ್ನಿಸಲಿ ಎಂಬುದೇ ನನ್ನ ಆಶಯವಾಗಿದೆ. ಈ ಸಂದರ್ಭದಲ್ಲಿ ಕಟ್ಟಡ ನಿರ್ಮಾಣಕ್ಕಾಗಿ ಮಂಗಳೂರಿಗೆ ಬಂದು ನೆಲೆಸಿದ ಹೆಣ್ಣುಮಗಳೊಬ್ಬಳ ಹೇಳಿಕೆ ಈ ರೀತಿ ಇದೆ. “ನಮ್ಮ ಕಡೆ ಗಂಡಂದಿರು ಈಗಲೂ ನಮಗೆ ಹೊಡೆಯುತ್ತಾರೆ. ನನ್ನ ಸಂಪಾದನೆಯ ಮೇಲೂ ನನಗೆ ಅಧಿಕಾರವಿಲ್ಲ ಇಲ್ಲಿಯ ಮಂದಿ ಈ ರೀತಿ ಮಾಡೊಲ್ಲ”. ಇಂತಹ ಸಮಸ್ಯೆಗಳು ನಿವಾರಣೆಯಾಗಲಿ ಎಂಬುದೇ ಎಲ್ಲರ ಆಶಯವಾಗಿರಬೇಕು. ಪ್ರಕೃತಿಯಿಂದಲೇ ಹೆಚ್ಚಿನ ಜವಬ್ದಾರಿಗಳನ್ನು ಪಡೆದುಕೊಂಡ ಮಹಿಳೆಯರ ಮೇಲೆ ಸಾಮಾಜಿಕ ಕಾರಣಗಳಿಂದಾಗಿ ಶೋಷಣೆ ನಡೆಯಬಾರದು.

